ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೨ ಫೆಬ್ರವರಿ ೨೦೧೬ ಸಂಚಿಕೆ : ೦೨



ಜನವರಿ ೨ರಂದು, ಮೈಸೂರಿನಲ್ಲಿ ಏರ್ಪಡಿಸಿದ್ದ ಸುತ್ತೂರು ಜಗದ್ಗುರು ಲಿಂ. ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ಜನ್ಮಶತಮಾನೋತ್ಸವ ಸಮಾರಂಭವನ್ನು ಭಾರತದ ಪ್ರಧಾನ ಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ, ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರ ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ದೇಶ್ವರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕರ್ನಾಟಕದ ರಾಜ್ಯಪಾಲರಾದ ಶ್ರೀ ವಿ.ಆರ್. ವಾಲಾ, ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ, ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್, ಶ್ರೀ ಸದಾನಂದಗೌಡ, ಶ್ರೀ ಸಿದ್ಧೇಶ್ವರ್, ಬಿಜೆಪಿ ರಾಜ್ಯಾಧ್ಯಕ್ಷ ಶ್ರೀ ಪ್ರಹ್ಲಾದ ಜೋಶಿ, ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪ ಹಾಗೂ ಶ್ರೀ ಜಗದೀಶ ಶೆಟ್ಟರ್ ಅವರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಆಪ್ತಸಮಾಲೋಚನೆಯಲ್ಲಿ ತೊಡಗಿರುವ ಅಪೂರ್ವ ಕ್ಷಣಗಳಿಗೆ ಸಾಕ್ಷಿಯಾಗಿರುವ ಶ್ರೀ ಸುತ್ತೂರು ಜಗದ್ಗುರುಗಳು, ಶ್ರೀ ಸಿದ್ದೇಶ್ವರ ಸ್ವಾಮಿಗಳು ಹಾಗೂ ರಾಜ್ಯಪಾಲರು



ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನ ವಾರ್ಷಿಕ ಸಮಾರೋಪ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪ, ಡಾ. ವಿಜಯಲಕ್ಷ್ಮೀ ಬಾಳೇಕುಂದ್ರಿ ಹಾಗೂ ಪ್ರಚಾರ್ಯ ಶ್ರೀ ಜಿ.ಎಸ್. ರೇಣುಕಪ್ಪ ಮೊದಲಾದವರು ಉಪಸ್ಥಿತರಿದ್ದರು.





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೨ ಫೆಬ್ರವರಿ ೨೦೧೬ ಸಂಚಿಕೆ : ೦೨


## ಒಳಪುಟಗಳಲ್ಲಿ .................




ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**
ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**
ಸಹಾಯಕ ಸಂಪಾದಕರು :
**ಕೆ.ಬಿ. ಶಿವಶಂಕರ್**
ಸಂಚಾಲಕರು :
**ಎಂ. ರೇಣುಕಾರಾಧ್ಯ**
ವಿತರಕರು :
**ಆರ್.ಎಸ್. ಮಲ್ಲೇಶಪ್ಪ**
ಪ್ರಕಾಶಕರು :
**ಹೆಚ್.ಬಿ. ಗಂಗಾಧರಯ್ಯ**
**ಜಿ.ಆರ್. ಶಂಕರಪ್ಪ**
ಛಾಯಾಚಿತ್ರ ಸಂಗ್ರಾಹಕರು :
**ಸಿ. ಕುಮಾರಸ್ವಾಮಿ**
ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.
ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು–572 104.
ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104
ದೂ: 0816–2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ಚಂದಾ ವಿವರ : ವಾರ್ಷಿಕ ಚಂದಾ ರೂ. 200/–
ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 12.00

# ಇಬ್ಬರು ಪುಣ್ಯಪುರುಷರ ಸ್ಮರಣೋತ್ಸವ



*'ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ,* ***ನಿಮ್ಮ ಶರಣರ ಸೂಳ್ನುಡಿಯ ಒಂದರ ಘಳಿಗೆ ಇತ್ತೊಡೆ ನಿಮ್ಮನಿತ್ತೆ ಕಾಣಾ ರಾಮನಾಥಾ'-*** ಎಂಬ ಜೇಡರ ದಾಸಿಮಯ್ಯನವರ ಸ್ಮರಣೋತ್ಸವದ ಪುಣ್ಯದಿನ ಫೆಬ್ರವರಿ ಎಂಟನೆಯ ಸೋಮವಾರ. ವಚನ ಸಾಹಿತ್ಯದ ಮೊದಲ ವಚನಕಾರ ವಚನದ ಅಂಕಿತ ರಾಮನಾಥ. ***'ಕಡೆಗೀಲಿಲ್ಲದ ಬಂಡಿ ಹೊಡೆ ಗೆಡೆಯದೆ ಮಾಬುದೆ, ಕಡೆಗೀಲು ಬಂಡಿಗಾಧಾರ, ಕಡು ದರ್ಪವೇರಿದ ಒಡಲೆಂಬ ಬಂಡಿಗೆ ಮೃಢಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ'*** ಎನ್ನುವ ದಾಸಿಮಯ್ಯ ವಚನ ಸಾಹಿತ್ಯಕ್ಕೆ ಶ್ರೀಕಾರವ ಬರೆದ ಮಹಾಶರಣರು. ಅವರು 'ಸತಿಪತಿಗಳೊಂದಾದ ಭಕ್ತಿ'ಗೆ ಹೆಸರಾದ ದಂಪತಿಗಳು. ದುಗ್ಗಳೆಯಂಥ ಶರಣೆ ದಾಸಿಮಯ್ಯನವರ ಬದುಕಿಗೆ ಜ್ಯೋತಿಯಾಗಿ ಬಾಳಿದರು. ***'ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ, ಒಡಲುಗೊಂಡವನೆಂದು ಜಡಿದು ನುಡಿಯದಿರಾ, ನೀನು ಎನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥಾ'*** ಎಂಬ ಸಾತ್ವಿಕ ಧೈರ್ಯಮೇರು ದಾಸಿಮಯ್ಯನವರ ವಚನಗಳು ಅಮೃತಬಿಂದುಗಳು.

* * *

ಫೆಬ್ರವರಿ 18ರ ಗುರುವಾರ ಶರಣ ಹರ್ಡೇಕರ ಮಂಜಪ್ಪನವರ ಸ್ಮರಣೋತ್ಸವದ ಪುಣ್ಯದಿನ. ಕರ್ನಾಟಕದ ಗಾಂಧಿ ಎಂದೇ ಪ್ರಖ್ಯಾತರಾಗಿದ್ದ ಹರ್ಡೇಕರ್ ಮಂಜಪ್ಪನವರು 'ಬನವಾಸಿಯಲ್ಲಿ ಹುಟ್ಟಿ, ಸಿರ್ಸಿಯಲ್ಲಿ ಶಿಕ್ಷಕರಾಗಿ, ದಾವಣಗೆರೆಯಲ್ಲಿ ಸಮಾಜಕಾರ್ಯವನ್ನು ಕೈಗೆತ್ತಿಕೊಂಡು, ಹರಿಹರದಲ್ಲಿ ಸತ್ಯಾಗ್ರಹ ದೀಕ್ಷೆ ಧರಿಸಿದ ಮಂಜಪ್ಪನವರು ಐಕ್ಯರಾದುದು ಆಲಮಟ್ಟಿಯಲ್ಲಿ. 'ಅನಿಕೇತನ'ರಾಗಿ 60 ವರ್ಷ ಬಾಳಿದ ಇವರು. ಟಿಳಕದಿಂದ ಪ್ರಭಾವಿತರಾದರೂ, ಗಾಂಧೀಜಿ, ಬಸವಣ್ಣನವರ ಆದರ್ಶದಲ್ಲಿ ಬೆಳೆದವರು. ಆದುದರಿಂದ ಮಂಜಪ್ಪನವರದು ಗಾಂಧೀಜಿ ಮತ್ತು ಬಸವಣ್ಣನವರು ಏಕೀಭವಿಸಿದ ವ್ಯಕ್ತಿತ್ವವಾಗಿದ್ದಿತು. ಹೀಗೆ ಬಸವಣ್ಣನವರಲ್ಲಿ ಗಾಂಧೀಜಿಯವರನ್ನು ಕಂಡ ಕಾರಣ, ಬಸವತತ್ತ್ವಾದರ್ಶದಲ್ಲಿ ಸಮಾಜವನ್ನು ಕಟ್ಟಲು, ರಾಷ್ಟ್ರವನ್ನು ರೂಪಿಸಲು ಕಂಕಣಬದ್ಧರಾದರು'

'ಉಪ್ಪು, ಕಾರ, ಸೀಗಳನ್ನು ಬಿಟ್ಟು, ಸಾತ್ವಿಕ ಆಹಾರವನ್ನು ಮಿತವಾಗಿ ಸೇವಿಸಿ, ನಾಲಿಗೆಯನ್ನು ಬಿಗಿ ಹಿಡಿದು ಮಹತ್ವಾಕಾಂಕ್ಷಿಯಾಗಿ, ಯಾವುದೊಂದು ಉದಾತ್ತ ಕಾರ್ಯದಲ್ಲಿಯೇ ಆಸಕ್ತ ನಾಗಿದ್ದರೆ ತ್ರಿಕರಣಗಳಲ್ಲಿ ಕಾಯ ಸಂಬಂಧವಾದ ಬ್ರಹ್ಮಚರ್ಯವನ್ನು ಮಾತ್ರ ಧಾರಾಳವಾಗಿ ಆಚರಿಸಬಹುದು. ಅದರಿಂದ ಮಾನಸಿಕ ಬಲವು ಎಷ್ಟೋ ಹೆಚ್ಚಿ, ಸಾರ್ವಜನಿಕ ಸೇವೆಗೆ ಬಹಳ ಸಹಾಯವಾಗುತ್ತದೆ'- ಎನ್ನುವ ಅಭಿಪ್ರಾಯ ಹರ್ಡೇಕರ ಮಂಜಪ್ಪನವರದು. ಪರಮಪೂಜ್ಯ ಸಿದ್ಧಗಂಗಾ ಶ್ರೀಗಳವರ ಅಭಿಪ್ರಾಯವೂ ಇದೇ ಆಗಿದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ನಿಗಮಾಗಮ



*ವೇದ ಎಂಬ ಮಾತಿಗೆ ಜ್ಞಾನವೆಂದು ಅರ್ಥ. ಜ್ಞಾನ ಜೀವನದ ಉಸಿರು. ನಮ್ಮ ಸಂಸ್ಕೃತಿಯ ತಳಹದಿ. ನಮ್ಮ ಪೂರ್ವಿಕರ ದೇವತಾನ್ವೇಷಣದ, ಸತ್ಯಾನ್ವೇಷಣದ ಚರಿತ್ರೆ ವೇದಗಳಲ್ಲಿ ಅಡಗಿದೆ. ವೇದಗಳನ್ನು ಅಧ್ಯಯನ ಮಾಡುವುದು ಮತ್ತು ಅಧ್ಯಯನ ಮಾಡಿದ ವೇದಗಳನ್ನು ಲೋಕದಲ್ಲಿ ಪ್ರಚಾರ ಮಾಡುವ ವಿಷಯದಲ್ಲಿ ಮಾನವನೆಂದೂ ಮೈಮರೆತಿರಬಾರದು. ಇದೇ ಜೀವನದ ಪರಮ ತಪಸ್ಸು. ಇದೇ ಲೋಕ ಕಲ್ಯಾಣದ ಮಾರ್ಗ, ಇದೇ ಪರಮ ಕರ್ತವ್ಯ, ಇದೇ ಪರಮ ಸತ್ಯ. ಆದ್ದರಿಂದ ವೇದಾಧ್ಯಯನ ವಿಷಯದಲ್ಲಿ ಯಾರೂ ಮೈಮರೆತಿರಬಾರದು ಎಂಬುದು ಪುರಾತನ ವಿದ್ವಾಂಸರ ಅಭಿಪ್ರಾಯ. ಜೀವನದ ಆಗುಹೋಗುಗಳನ್ನು ವಿಶ್ವದ ಸತ್ಯಾಸತ್ಯತೆಗಳನ್ನು ಮತ್ತು ವಿಶ್ವಕ್ಕೂ ಜೀವನಿಗೂ ಇರುವ ಸಂಬಂಧ ಪ್ರಕಾರಗಳನ್ನು ಯೋಚಿಸತೊಡಗಿದ ಜ್ಞಾನಿಗಳಿಗೆ ಹೊಳೆದ ಸತ್ಯವೇ* ***'ಧರ್ಮ'*** *ವೆನಿಸಿತು. ವೇದ ಸಾಹಿತ್ಯದ ಸತತಾಭ್ಯಾಸ ಮತ್ತು ಅನುಷ್ಠಾನಗಳಲ್ಲಿ ತೊಡಗಿ ಆತ್ಮಾನಂದದಲ್ಲಿ ತನ್ಮಯರಾದ ಋಷಿಮುನಿಗಳ ದಿವ್ಯೋಪದೇಶಗಳು ಪರಂಪರೆಯಿಂದ ಶಿಷ್ಯ ಪ್ರಶಿಷ್ಯರಿಗೆ ಶ್ರವಣಮುಖದಿಂ ಬೋಧಿಸುತ್ತ ಬಂದುದರಿಂದ* ***'ಶ್ರುತಿ'*** *ಗಳೆನಿಸಿದುವು.*

*ವೇದೋಕ್ತವಾದ ಧರ್ಮಸ್ವರೂಪವು ಜನತೆಯ ಕಲ್ಯಾಣಕ್ಕಾಗಿ, ಸ್ಮೃತಿಗಳ ಉಗಮಕ್ಕೆ ಕಾರಣವಾಯಿತು. ಸ್ಮೃತಿಯು ಧರ್ಮದ ಆಧಾರವಾಗಿದೆ. ಅವು ಧರ್ಮಾನುಷ್ಠಾನದ ಅವಶ್ಯಕತೆಯನ್ನು ಹೇಳುತ್ತವೆ. ಭಕ್ತಾನುಕಂಪಿಯಾದ ಆಸ್ತಿಕರ ಆಪ್ತನಾದ ಭಗವಂತನು ಭಕ್ತರ ಉದ್ಧಾರದ ಮಾರ್ಗವನ್ನು ತಿಳಿಯ ಹೇಳಿರುವ ಜ್ಞಾನಭಂಡಾರವನ್ನು* ***'ಆಗಮ'*** *ಗಳೆಂದು ಕರೆಯುವರು. ತಂತ್ರ ಪ್ರಧಾನವಾದುದರಿಂದ ಆಗಮ ಶಾಸ್ತ್ರವನ್ನು* ***'ತಂತ್ರಶಾಸ್ತ್ರ'*** *ವೆಂದೂ ಹೆಸರಿಸಿರುವರು. ವೇದವು ಪರಮಾತ್ಮನ ರೂಪವಾದರೆ, ಆಗಮಗಳು ವಾಣಿರೂಪಗಳು, ಅಂತೆಯೇ* ***'ವೇದಸಾರ ಶಿವಾಗಮ'*** *ಎಂದಾಗಿದೆ. ಒಟ್ಟಿನಲ್ಲಿ ವೇದ ಮತ್ತು ಆಗಮಗಳು* ***'ನಿಗಮಾಗಮ'*** *ಗಳೆಂದು ಪ್ರಖ್ಯಾತವಾಗಿವೆ.*

ಚುನಾವಣೆ ಎನ್ನುವುದು ಉಚ್ಚವಾದ ಒಂದು ಯೋಜನೆ. ಪ್ರಜಾಪ್ರಭುತ್ವದಲ್ಲಿ ಜನಗಳೇ ತಾವು ಸರ್ಕಾರ ರಚನೆ ಮಾಡುವ ಅಧಿಕಾರವುಳ್ಳವರಾಗಿದ್ದಾರೆ. ಕೊಡುವಂತಹ ಮತಗಳೇ ನಿರ್ಣಾಯಕವಾಗಿರುವಂತಹ ಶಕ್ತಿ. ಅಂದಮೇಲೆ ಯಾರು ಆ ಶಕ್ತಿಯುಳ್ಳವರಾಗಿದ್ದಾರೆ; ಅಧಿಕಾರವುಳ್ಳವರಾಗಿದ್ದಾರೆ, ಅವರಿಗೆ ತಮ್ಮ ಶಕ್ತಿಯ ಪ್ರಯೋಗ ಪ್ರಾಜ್ಞತೆ ಬರಬೇಕು. ಇವತ್ತು ಕೊಡುವಂತಹ ಒಂದೊಂದು 'ಓಟಿನ' ಬೆಲೆಯನ್ನು ನಾವು ಕಟ್ಟಲಿಕ್ಕೆ ಸಾಧ್ಯವಿಲ್ಲ.

* * *

ಇಂದು ಯಾರು ತಮ್ಮ ಮತಗಳನ್ನು ದುರುಪಯೋಗ ಮಾಡಿಕೊಳ್ಳುತ್ತಾ ಇದ್ದಾರೆಯೋ ಮತವನ್ನು ವಿಕ್ರಯ ಮಾಡುತ್ತಾ ಇದ್ದಾರೆಯೋ ಅವರು ಪಾಪದ ಹೊರೆಯನ್ನೇ ಹೊರುತ್ತಾರೆ.

## ಶ್ರೀ ಸಿದ್ಧಲಿಂಗೇಶ್ವರ ವಚನ



***ಮರವೆಯ ತಮವ ಕಳೆಯಯ್ಯಾ***
***ಅರುಹಿನ ಜ್ಯೋತಿಯ ಬೆಳಗಯ್ಯಾ***
***ಅರುಹಿನ ಜ್ಯೋತಿಯ ಬೆಳಗಿನಿಂದ ನಿಮ್ಮ ಕುರುಹಕಂಡು***
***ಕೂಡುವ ತುರೀಯಾವಸ್ಥೆಯ ಸುಖವ ಕೊಡುಕಂಡ್ಯಾ***
***ಲಿಂಗ ತಂದೆ ಕೊಡದಿರ್ದರೆ ನಿಮಗೆ ಪ್ರಮಥರಾಣೆ***
***ಬಸವಣ್ಣನಾಣೆ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಮರವೆಯ ತಮವ ಕಳೆಯಯ್ಯಾ-, ಮರೆವೆಯ ಅಜ್ಞಾನದ, ತಮವ ಕಳವಳವನು, ಕಳೆಯಯ್ಯಾ-ನಷ್ಟವ ಮಾಡಯ್ಯಾ, ಅರುಹಿನ ಜ್ಯೋತಿಯ ಬೆಳಗಯ್ಯಾ ಅರುಹಿನ-ಜ್ಞಾನದ, ಜ್ಯೋತಿಯ-ಕಾಂತಿಯ, ಬೆಳಗಯ್ಯಾ-ಪ್ರಕಾಶಿಸಯ್ಯಾ, ನಿಮ್ಮ ಕುರುಹ ಕಂಡು ಪ್ರಾಣಲಿಂಗದಲ್ಲಿ ಕೂಡುವಂಥ ಕೂಟವನು ನೋಡಿ, ಕೂಡುವ ತುರೀಯಾವಸ್ಥೆಯ, ಕೂಡುವ-ಸಮರಸ ವಾಗುವ, ತುರೀಯಾವಸ್ಥೆಯ-ಅರುಹಿನಾವಸ್ಥೆಯ, ಸುಖವ ಕೊಡು ಕಂಡಾ, ಸುಖವ-ಪರಿಣಾಮವನು ಕೊಡು ಕಂಡಾ, ಕರುಣಿಸಿ ಕೊಡು ಕಂಡಾ, ಲಿಂಗ ತಂದೆ-ಲಿಂಗಯ್ಯನೆಂಬೆನ್ನಾತ್ಮ ಜನಕನೆ, ಕೊಡದಿದ್ದರೆ-ಕರುಣಿಸಿ ಕೊಡದಿದ್ದರೆ, ನಿಮಗೆ ಪ್ರಮಥ ರಾಣೆ- ಪ್ರಮಥಗಣಂಗಳ ಮೇಲಣ ಪ್ರತಿಜ್ಞೆಯು, ಬಸವಣ್ಣನಾಣೆ, ಬಸವೇಶ್ವರಸ್ವಾಮಿಗಳ ಮೇಲಣ ಪ್ರತಿಜ್ಞೆಯು, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಲಿಂಗದಲಿ ನಿಬ್ಬೆರಗನೀವಾದುದ ಕಂಡು
ಮಾತಿಗೆ ಮೀರಿದ ಸುಖಿಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನ್ಯರನುಡಿಗಳಿಗೆ ಅನ್ಯರನಿಂದೆಗೆ
ಅನ್ಯರ ಸ್ತುತಿಗೆ ಒಡ್ಡದಿರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಮಾನಿಯೆನಿಸದಿರು ಅನುಜ್ಞಾನಿಯೆಂದೆನಿಸು
ಅನುವರಿದು ಘನವ ತೋರಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಭಯಹಸ್ತವ ನೀಡಿ ಜಗವ ನೀ ಪೊರೆದಿರುವೆ
ಉಭಯ ಸಂಶಯವ ಕಳೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೊಡುವ ಲಿಂಗವಾದೆ ಬೇಡದ ಗುರುವಾದೆ
ಎಡೆಬಿಡದ ಜಂಗಮ ಪ್ರಭುವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದ ಅಂಗವೆ ಲಿಂಗದ ನೇತ್ರವೆ
ಲಿಂಗದ ಶ್ರೋತ್ರವೆ ಜಿಹ್ವೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದ ಪಾದವೆ ಲಿಂಗದ ಹಸ್ತವೆ
ಲಿಂಗದ ಶಿರವೆ ಘ್ರಾಣವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದ ಶ್ರೀಮನವೆ ಲಿಂಗದ ಬುದ್ಧಿಯೆ
ಲಿಂಗದ ಚಿತ್ತವೆ ಶ್ರೀ ಕ್ರಿಯೆಯೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗಕ್ರಿಯೆಗಳನೆಲ್ಲ ಲಿಂಗಕ್ರಿಯೆಗಳಾಗಿಸಿ
ಅಂಗಭಾವಗಳನೆಲ್ಲ ಲಿಂಗಭಾವಗೊಳಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿ ಜ್ಞಾನದ ಗುರುವೆ ಸ್ವಾನುಭಾವದ ಗುರುವೆ
ವೀರವೈರಾಗ್ಯದ ಮೇರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಭಗವಂತ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

**'ಭಗವತ್'** ಇದು ಅರ್ಥಗರ್ಭಿತ ಆಧ್ಯಾತ್ಮಿಕ ಸುಂದರ ಶಬ್ದ. ಹಲವಾರು ಅರ್ಥಛಾಯೆಗಳು ಈ ಪದಕ್ಕೆ. ಅದರಲ್ಲಿ ಮುಖ್ಯವಾಗಿ **'ಭಗ'** ಎಂದರೆ ಸಂಪತ್ತು. 'ಭಗ' ಅಥವಾ ಸಂಪತ್ತು ಉಳ್ಳವನು ಭಗವಂತ. ಈ ಭಗವತ್ ಶಬ್ದದ ಮೂಲಕ ಸತ್ಯದ ಚಿಂತನ ಮಾಡುವುದು ಭಗವಚ್ಚಿಂತನ.

ಬದುಕಿಗೆ ಯಾವುದು ಅಮೂಲ್ಯವೋ, ಅನಿವಾರ್ಯ ವೋ ಅದು ಸಂಪದ. ಅದರಿಂದ ನಮ್ಮ ಬದುಕು ಭವ್ಯ- ದಿವ್ಯ. ಹೂವಿನ ಬದುಕಿಗೆ ಸೌಂದರ್ಯ ಅನಿವಾರ್ಯ. ಅದು ಅದರ ಸಂಪದ. ಜಗತ್ತಿನಲ್ಲಿ ಸೌಂದರ್ಯಸಂಪದವಿಲ್ಲದ ಒಂದು ಹೂವೂ ಇಲ್ಲ. ಈ ಅರ್ಥದಲ್ಲಿ ಕೋಗಿಲೆಗೆ ಕಂಠವೇ ಸಿರಿ. ಗಿಳಿಗೆ ಸವಿನುಡಿಯೇ ಸಿರಿ. ಆನೆಗೆ ಬಲ, ಕುದುರೆಗೆ ಓಟ, ಕೋತಿಗೆ ಆಟ, ಹೀಗೆ ಒಂದೊಂದಕ್ಕೆ ಒಂದೊಂದು ಸಿರಿ!

ಒಂದರ್ಥದಲ್ಲಿ ಈ ಜಗವೆಲ್ಲವೂ ಒಂದು ಸಂಪದವೇ! ಮಾನವನು ಈ ಜಗದ ನಿಸರ್ಗ ತೊಟ್ಟಿಲಲ್ಲಿ ಆಡಿ ಬೆಳೆಯುವನು. ಅಷ್ಟೇ ಏಕೆ ಅಮೀಬಾದಿಂದ ಆನೆಯವರೆಗೆ, ಅಜ್ಞಾನಿಯಿಂದ ವಿಜ್ಞಾನಿಯವರೆಗೆ ಎಲ್ಲರಿಗೂ ಈ ನಿಸರ್ಗದ ನೆರವು ಅವಶ್ಯ. ಕೆಳಗೆ ಹಸಿರುಭೂಮಿ, ಮೇಲೆ ವಿಶಾಲ ಆಗಸ. ಎರಡರ ಮಧ್ಯ ಜೀವಕುಸುಮ ಅರಳಿದೆ. ಈ ಭೂವ್ಯಾಕಾಶಗಳೇ ಬದುಕಿನ ಎರಡು ದಂಡೆಗಳು. ಅವುಗಳ ಮಧ್ಯದಲ್ಲಿಯೇ ಸಕಲಜೀವರಾಶಿಗಳು ನಕ್ಕು ನಲಿಯುತ್ತವೆ.

ಲಕ್ಷ, ಕೋಟಿ ವರುಷಗಳಿಂದ ಈ ಮಣ್ಣು ನಮಗಾಗಿ ದುಡಿಯುತ್ತಲಿದೆ. ಹಸಿರು ಹಾಸಿದೆ. ಹೂವ ಅರಳಿಸಿದೆ. ಮರಗಳ ಬೆಳೆಸಿದೆ. ದವಸ-ಧಾನ್ಯಗಳನ್ನಿತ್ತಿದೆ. ಕೋಟಿ, ಕೋಟಿ ಜೀವಜಂತುಗಳ ಸಾಕಿ ಸಲಹಿದೆ. ಈ ಮಣ್ಣಿನಿಂದಾಗಿ ಕಣ್ಣಿಗೆ ಕಳೆ, ಮನಕೆ ಮುದ. ತನುವಿಗೆ ಹಿತ. ಇಂಥ ಮಣ್ಣಿನ ಸ್ವಲ್ಪ ಭಾಗವನ್ನು, ಚಿನ್ನ ಬೆಳ್ಳಿಗಳನ್ನು ಸಂಗ್ರಹಿಸಿದ ಮಾನವ ತಾನೇ ಸಿರಿವಂತನೆಂದ. ಈ ನೆಲ-ನೀರು, ಬೆಳಕು-ಗಾಳಿ, ಬಯಲಿನಿಂದಾದ ಭವ್ಯ ನಿಸರ್ಗವೇ ನಿಜ ಸಿರಿ ಎನ್ನುವುದನ್ನು ಮರೆತ.

ಈ ಭೂಮಿಯ ೩/೪ ಭಾಗ ನೀರಿನಿಂದ ಆವರಿಸಿದೆ. ಮೇಲಿನಿಂದ ಸುರಿಯುವ ಮಳೆಯು ಹೊಳೆ-ಹಳ್ಳವಾಗಿ, ಕೆರೆ-ಕಟ್ಟೆಯಾಗಿ, ಸಮುದ್ರ ಸಾಗರವಾಗಿ ಸಕಲ ಜೀವರಾಶಿಗಳನ್ನು ರಕ್ಷಿಸಿದೆ. ಈ ಪ್ರಪಂಚದ ತಾಪವನ್ನು, ಕೊಳೆಯನ್ನು ಕಳೆಯುವಲ್ಲಿ ನೀರಿನ ಪಾತ್ರವು ಹಿರಿದು! ಅದಿಲ್ಲದಿರೆ ಬೆಳೆಯಿಲ್ಲ. ಬದುಕಿಲ್ಲ. ದಾಸಿಮಾರ್ಯರು ಹೇಳುತ್ತಾರೆ. ***'ಸುರಿಯುವ ಮಳೆ ಸುರಿಯದಿರೆ, ಐದುವ ಪೈರು ಐದದಿರೆ ನೀನೆತ್ತಲ್ಲಿ ಈಯುವೆ ರಾಮನಾಥ!'*** ಮಳೆಯಾಗದಿದ್ದರೆ ಹೊಳೆ ಹರಿಯದಿದ್ದರೆ ಭೂಮಿ ಬೆಳೆಯದಿದ್ದರೆ ನಮ್ಮನ್ನು ಕಾಯುವವರಾರು?

ಆಧ್ಯಾತ್ಮವೆಂದರೆ ಕೇವಲ ಕಲ್ಪನೆಯಲ್ಲ. ನಮ್ಮ ಸುತ್ತಲಿನ ನಿಸರ್ಗಸಿರಿಯನ್ನು ಅರಿತು ಅನುಭವಿಸುವುದು, ಆನಂದಿಸು ವುದು ಆಧ್ಯಾತ್ಮ; ಪ್ರಾಯೋಗಿಕ ಆಧ್ಯಾತ್ಮ. ಸೂರ್ಯನು ಜಗವನ್ನೆಲ್ಲ ಬೆಳಗುವನು. ನಮ್ಮ ಮೈ-ಮನಗಳಿಗೆ ಕಾವು ಕೊಡುವನು. ಜೀವಚೈತನ್ಯ ಮೂಡಿಸುವನು. ಚಂದಿರನು ತನುವಿಗೆ ತಂಪನ್ನು, ಮನಕ್ಕೆ ಮುದವನ್ನು ನೀಡುವನು. ನಿರಂತರ ಬೀಸುವ ಪರಿಶುದ್ಧ ಗಾಳಿಯು ನಮ್ಮ ಪ್ರಾಣ ಸಂರಕ್ಷಕ. ಅನಂತವಾಗಿ ಹರವಿದ ಬಯಲು ನಮ್ಮ ನಿಜಾಶ್ರಯ! ಆ ಬಯಲಿನಲ್ಲಿ ಸುಮಾರು ಹತ್ತು ಸಾವಿರ ಕೋಟಿ ಸೂರ್ಯರು. ಅದು ಗ್ಯಾಲಕ್ಸಿ, ಸೂರ್ಯಸಾಗರ! ಒಬ್ಬ ಸೂರ್ಯನೇ ಇಷ್ಟೆಲ್ಲ ಮಹತ್ಕಾರ್ಯ ಮಾಡುವನು. ಇನ್ನು ಆ ಸೂರ್ಯ ಸಾಗರದ ಶಕ್ತಿ ಸಾಮರ್ಥ್ಯ ಎಷ್ಟಿರಬೇಕು? ಊಹಿಸಲ ಸಾಧ್ಯ? ಈ ಸಮಸ್ತ ಸಿರಿಯ ಒಡೆಯನೇ ದೇವನು! ಅವನೊಬ್ಬ ವ್ಯಕ್ತಿಯಲ್ಲ, ತತ್ತ್ವಮೂರ್ತಿಯಲ್ಲ, ಅಮೂರ್ತ-ಅದ್ವಿತೀಯ ಶಕ್ತಿ!

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಈ ವಿಶ್ವಸಿರಿಯತ್ತ ನೋಡಿದಾಗ ಯಾರೂ ಬಡವರಲ್ಲ, ಸಿರಿವಂತರಲ್ಲ. ನಾವೆಲ್ಲರೂ ಸಮಾನರು, ಸಂತೋಷಿಗಳು. ಈ ವಿಶ್ವಸಿರಿಯನ್ನು ಮರೆತು ನಾವು ಚಿನ್ನ-ಬೆಳ್ಳಿ ಮುತ್ತುರತ್ನಗಳೇ ಸಿರಿಯೆಂದು ಭಾವಿಸಿದೆವು, ಬಂಧನಕ್ಕೆ ಒಳಗಾದೆವು. ಒಂದು ಕೋಳಿಯು ಸಿರಿವಂತರ ಮನೆಯ ತಿಪ್ಪೆಯನ್ನು ಕೆದರಿತು. ಆಶ್ಚರ್ಯ! ಅದಕ್ಕೊಂದು ರತ್ನದ ಹರಳು ದೊರೆಯಿತು. ಕೋಳಿಯು ತನ್ನ ಚುಂಚಿನಿಂದ ಆ ರತ್ನವನ್ನು ದೂರ ಎಸೆದು ಹೇಳಿತು *'ಎಲೈ ರತ್ನವೇ, ನೀನು ರಾಜ-ಮಹಾರಾಜರನ್ನು ಮರುಳು ಮಾಡಿರಬಹುದು. ಆದರೆ ನನ್ನನ್ನು ನೀನೆಂದೂ ಮರುಳ ಮಾಡಲಾರೆ!'* ಬಳಿಕ ಕೋಳಿಯು ಮತ್ತೆ ತಿಪ್ಪೆಯನ್ನು ಕೆದರತೊಡಗಿತು. ಅದಕ್ಕೆ ಒಂದು ಜೋಳದ ಕಾಳು ದೊರೆಯಿತು. 'ನೀನೇ ನನ್ನ ನಿಜಸಿರಿ!' ಅಲ್ಲೇ ನಿಂತಿದ್ದ ಸಂತ ನುಡಿದ *"ಕೋಳಿಯೇ ನಿನ್ನಷ್ಟು ಬುದ್ಧಿ ಈ ಮಾನವನಿಗೆ ಇಲ್ಲವಲ್ಲ".* ಕೋಳಿ ಹೇಳಿತು 'ಅಂತೆಯೇ ಆತ ಏನೆಲ್ಲಾ ಇದ್ದರು ಅಸಂತುಷ್ಟ, ನಾವು ಸದಾ ಸಂತುಷ್ಟರು!'

ಒಬ್ಬ ಚೀನಿ ಸಂತ ನಾವೆಯಲ್ಲಿ ಕುಳಿತು ನದಿ ದಾಟುತ್ತಿದ್ದ. ಅದೇ ನಾವೆಯಲ್ಲಿ ಒಬ್ಬ ಸಿರಿವಂತನಿದ್ದ. ಸಂತರನ್ನು ಕಂಡು ವಂದಿಸಿದ. ಚಿನ್ನದ ಸರವನ್ನು ಕಾಣಿಕೆಯಾಗಿತ್ತ. ತಕ್ಷಣ ಸಂತ ಸರವನ್ನು ನದಿಗೆ ಎಸೆದ. ಅಲ್ಲೇ ಇದ್ದ ಸಿರಿವಂತ ನೀರಿಗಿಳಿದು ಅದನ್ನು ತಂದ. 'ಇದು ಚಿನ್ನದ ಸರ. ಇದರ ಬೆಲೆ ಎಷ್ಟು ನಿಮಗೆ ಗೊತ್ತೆ?' ಎಂದು ಕೇಳಿದ. ಸಂತ ಲಾವೋತ್ಸೆ ಹೇಳಿದ, 'ಅದರ ಬೆಲೆ ನಿನ್ನನ್ನು ನೀರಿಗೆ ಜಿಗಿಸುವಷ್ಟು! ನದಿಯು ಸಾವಿರಾರು ಬಣ್ಣಬಣ್ಣದ ಮೀನು-ಮೊಸಳೆಗಳಿಗೆ, ಅಸಂಖ್ಯ ಜಲಚರ ಪ್ರಾಣಿಗಳಿಗೆ ಆಶ್ರಯವಿತ್ತಿದೆ. ಈ ಜೀವಂತ ಸಿರಿಯ ಎದುರು ನಿನ್ನ ಈ ನಿರ್ಜೀವ ಚಿನ್ನದ ಸರಕ್ಕೆ ಏನು ಬೆಲೆ?' ಸಂತರ ಈ ನುಡಿಗಳ ಕೇಳಿದಾಗ ಸಿರಿವಂತನ ಕಣ್ಣು ತೆರೆಯಿತು.

ಭಗವಂತನೇ ಈ ವಿಶ್ವರೂಪದಲ್ಲಿ ಅಭಿವ್ಯಕ್ತ! ಜಗವಿದೆಲ್ಲವೂ ಅವನೇ! ಜಗವೆಲ್ಲವೂ ಅವನದೇ! ಈ ಭಗವದೈಸಿರಿಯ, ವಿಶ್ವಸಿರಿಯ ಅರಿವಾದಾಗ ನಮ್ಮಲ್ಲಿ ಬಡವ ಬಲ್ಲಿದ, ಸುರೂಪಿ-ಕುರೂಪಿ, ಪಾಪಿ-ಪುನೀತ, ಎಲ್ಲ ಭೇದ ಭಾವ, ಅಜ್ಞಾನ ಅಳಿಯುತ್ತದೆ. ದೇವನಿಂದ ನಮಗೆ ದೊರೆತುದರಲ್ಲಿಯೇ ನಾವು ಸದಾ ಸಂತುಷ್ಟರಾಗಿರುತ್ತೇವೆ.

ಒಂದು ಏಡಿ, ಅದರ ದೇಹ ವಿಕೃತ. ಅಡ್ಡ ಅಡ್ಡಾದ ತನ್ನ ವಿಚಿತ್ರ ನಡಿಗೆಯಲ್ಲಿ ಅದು ನಡೆದಿತ್ತು. ದೇವನಿಗೆ ಅದರ ವಿಕೃತ ದೇಹವನ್ನು ಕಂಡು ಕನಿಕರವೆನಿಸಿತು. ಏಡಿಯ ಬಳಿ ಬಂದು ದೇವನು ಹೇಳಿದ, ಉಳಿದ ಪ್ರಾಣಿಗಳಿಗೆ ನಾನು ಯಥೋಚಿತ ಸೌಂದರ್ಯ ನೀಡಿದೆ. ನಿನಗೆ ಮಾತ್ರ ಅಂಥ ಸೌಂದರ್ಯ ನೀಡಲಿಲ್ಲ, ನಿನ್ನ ನೋಡಿ ಈಗ ನನಗೆ ಕರುಣೆ ಹುಟ್ಟಿದೆ. ಬೇಡು ನಿನಗೆ ಎಂಥ ಸೌಂದರ್ಯ ಬೇಕು ಕೊಡುವೆ! ದೇವನೇ ನನ್ನ ದೇಹ, ನಡಿಗೆ ಸುಂದರವಾಗಿಲ್ಲವೆಂದು ಹೇಳಿದವರಾರು? ನನ್ನಂತೆ ಮನುಷ್ಯನಿಗೂ ನಡೆಯಲು ಬರುವುದಿಲ್ಲ. ಅಂಥ ವಿಶಿಷ್ಟ ದೇಹ ನೀನು ನನಗೆ ನೀಡಿರುವಾಗ ನಾನೇಕೆ ಕುರೂಪಿ? ದೇಹದ ಸೌಂದರ್ಯ ಇರುವುದು ಕಾರ್ಯೋತ್ಸಾಹದಲ್ಲಿ ವಿನಾ ಬಣ್ಣದಲ್ಲಲ್ಲ. ಏಡಿಯ ಸಂತೃಪ್ತ ಜೀವನ ಕಂಡು ದೇವನಿಗೆ ಹೆಮ್ಮೆ ಎನಿಸಿತು!

ಮರುಳಶಂಕರದೇವರು ಬಸವಣ್ಣನವರ ಮಹಾಮನೆಯಲ್ಲಿದ್ದರು. ಶರಣರು ಪ್ರಸಾದ ಸ್ವೀಕರಿಸಿದ ನಂತರ ಅವರು ಉಂಡುಬಿಟ್ಟ ಎಲೆಯನ್ನು ಎತ್ತುವುದು, ಅವರ ಜೀವನ ಕ್ರಮ. ಅವರದು ಬಡಕಲು ದೇಹ. ಮೈಮೇಲೆ ತುಂಡು ಬಟ್ಟೆ, ಶಿವಭಾವ, ಬುದ್ಧಿಯಲ್ಲಿ ಶಿವಬೆಳಗು. ಕೈಯಲ್ಲಿ ಶಿವಶರಣರ ನಿರಂತರ ಸೇವೆ. ಗುಪ್ತಭಕ್ತಿ ನಿರಾತಂಕವಾಗಿ ನಡೆದಿತ್ತು. ಒಂದು ದಿನ ಅಲ್ಲಮರು ಇದನ್ನು ಗುರುತಿಸಿ ಮರುಳಶಂಕರ ದೇವರಿಗೆ 'ನಮೋ ನಮೋ!' ಎಂದರು. 'ಇವರು ಮಣ್ಣು ಮರೆಯ ರತ್ನ!' ಎಂದು ಬಸವಾದಿ ಶಿವಶರಣರಿಗೆ ಅರುಹಿದರು. ತಕ್ಷಣ ಮರುಳಶಂಕರದೇವರು ತಮ್ಮ ಗುಪ್ತ -ಭಕ್ತಿ ವ್ಯಕ್ತವಾದುದನ್ನು ಕಂಡು ಬಟ್ಟ ಬಯಲಾದರು.

ಶರಣರಿಗೆ ಬಹಿರಂಗದಲ್ಲಿ ಅಂಥ ಸಿರಿಯೇನೂ ಇರಲಿಲ್ಲ. ಆದರೆ ಅವರು ಅಂತರಂಗದಲ್ಲಿ ಅನುಭಾವದ ನಿಜಸಿರಿಯ ಅರಸರಾಗಿದ್ದರು. ಅವರು ಹೊರಗೆ ಬಡವರು. ಒಳಗೆ ಘನಮನಸಂಪನ್ನರು. ಅದು ವಿಶ್ವಸಿರಿಯನ್ನು ಭಗವದೈಸಿರಿಯನ್ನು ಅರಿತ ಅನುಭಾವಿಗಳ ಯೋಗಜೀವನ!

ಪಂಚಮಹಾಭೂತಗಳಿಂದಾದ ಈ ವಿಶ್ವವೇ ನಿಜಸಿರಿ! ಅದರೊಡೆಯನೇ ಭಗವಂತನು! ಅಂಥ ಭಗವಂತನ ಈ ಭವ್ಯ ಜಗದಲ್ಲಿರುವ ನಾವೆಲ್ಲರೂ ಸಿರಿವಂತರೇ! ಈ ಸಂತೃಪ್ತಿಯ ಭಾವದಿಂದ ಬದುಕು ದಿವ್ಯ! □





# ಯುಗಾವತಾರಿ ಬಸವಣ್ಣನವರು

— ಆರ್.ಎಸ್. ಚಾಪಗಾವಿ *

ಮಹಾಮಾನವತಾವಾದಿ ಮಹಾತ್ಮಾ ಬಸವಣ್ಣನವರು ನಮ್ಮ ದೇಶ ಕಂಡ ಒಬ್ಬ ಮಹಾನ್ ಕಾರಣಿಕ ಪುರುಷರು. ಅವರ ನೇತೃತ್ವದಲ್ಲಿ ನಡೆದ ಸಮಾಜೋ ಧಾರ್ಮಿಕ ಆಂದೋಲನ ವಿಶ್ವವಿಖ್ಯಾತವಾದುದು. ಅದು ಒಂದು ಜನಪರ ಚಳುವಳಿಯಾಗಿತ್ತು. ಅದು ಮಾನವ ಇತಿಹಾಸದಲ್ಲಿ ನಡೆದ ಒಂದು ಅದ್ಭುತ ಘಟನೆಯಾಗಿತ್ತು. ಸಮಗ್ರ ಕ್ರಾಂತಿಯೇ ಅದರ ಗುರಿಯಾಗಿತ್ತು. ಬಸವಣ್ಣನವರು ಕ್ರಾಂತಿಯೆಸಗಿದ ೧೨ನೆಯ ಶತಮಾನವು ಭರತ ಖಂಡದ ಧಾರ್ಮಿಕ, ಸಾಮಾಜಿಕ ಪರಂಪರೆಯಲ್ಲಿ ಒಂದು ಚಿರಸ್ಮರಣೀಯ ಘಟ್ಟವಾಗಿದೆ. ಮನುಕುಲದ ಏಳ್ಗೆಗೆ ಬಸವಾದಿ ಶರಣರು ವಿಶ್ವಕ್ಕೆ ನೀಡಿದ ಸಂದೇಶ ಕಾಲವಾಗಿದೆ. ಆ ಆಂದೋಲನದ ಅಂಗವಾಗಿ ಹುಟ್ಟಿದ ವಚನ ಸಾಹಿತ್ಯವು ಸಾಂಪ್ರದಾಯಿಕ ಮಡಿ ಮೈಲಿಗೆಗಳಿಂದ ಹೊರಬಂದು ಜನಕಲ್ಯಾಣಕ್ಕಾಗಿ ಮಿಡಿದ ನವೀನ ಪ್ರಯೋಗವಾಗಿತ್ತು. ಸಮಷ್ಟಿ ಚಿಂತನೆ ಸಮಾನತೆಯ ಸಮೃದ್ಧ ಸಮಾಜದ ನಿರ್ಮಾಣವೇ ಅದರ ಆಶಯವಾಗಿತ್ತು.

೧೨ನೇ ಶತಮಾನದಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ ಕ್ಷೋಭೆಯಿಂದ ಕೂಡಿತ್ತು. ಅಜ್ಞಾನದ ಅಂಧಕಾರದಲ್ಲಿ ಸಮಾಜ ಮುಳುಗಿತ್ತು. ರಾಜಶಾಹಿ ಮುಷ್ಠಿಯಲ್ಲಿ ಬಳಲುತ್ತಿತ್ತು. ಪುರೋಹಿತಶಾಹಿಯ ಜರ್ಬಿನಲ್ಲಿ ಶೋಷಣೆಗೆ ಒಳಗಾಗಿತ್ತು. ಬಡತನ, ಅನ್ಯಾಯ, ಅತ್ಯಾಚಾರ, ಮೂಢನಂಬಿಕೆ, ಕಂದಾಚಾರಗಳ ಅಗ್ನಿಯಲ್ಲಿ ಬೆಂದು ಬಸವಳಿದಿತ್ತು. ವರ್ಗೀಕೃತ ವರ್ಣವ್ಯವಸ್ಥೆಯಲ್ಲಿ ಸಮಾಜದ ಕೆಳವರ್ಗದವರ ಸ್ಥಿತಿ ಶೋಚನೀಯವಾಗಿತ್ತು. ದುಡಿಯುವ ವರ್ಗ ದುಡಿಯುತ್ತಲೇ ಸಾಯುವ ಸ್ಥಿತಿ ಉಂಟಾಗಿತ್ತು. ಸಿರಿಸಂಪತ್ತು ಕೇವಲ ಮೇಲ್ವರ್ಗದವರ ಸೊತ್ತಾಗಿತ್ತು. ದೇವರು ಧರ್ಮ ವೇದಾಧ್ಯಯನ ಶಿಕ್ಷಣ ಕೇವಲ ಬ್ರಾಹ್ಮಣರ ಸ್ವತ್ತಾಗಿತ್ತು. ಸಮಾಜದ ಕೆಳವರ್ಗದ ಜನರಿಗೆ ಇದು ಬಹಿಷ್ಕೃತವಾಗಿತ್ತು. ವೇದ ಮಂತ್ರಗಳನ್ನು ಅವರು ಕಿವಿಯಿಂದ ಕೇಳಿಸಿಕೊಳ್ಳುವುದು ಕೂಡ ಮಹಾಪರಾಧವಾಗಿತ್ತು. ರಾಜರು ಜನಸೇವೆಯನ್ನು ಮರೆತು ಐಷಾರಾಮಿ ಜೀವನದಲ್ಲೇ ಮಗ್ನರಾಗಿದ್ದರು. ಅವರು ದಾನ ಧರ್ಮ ಮಾಡುತ್ತಿದ್ದರೂ ಅದರ ಫಲಾನುಭವಿಗಳೆಲ್ಲ ಮೇಲ್ವರ್ಗದವರೇ ಆಗಿದ್ದರು. ಇಂಥ ಡೋಲಾಯಮಾನ ಸಂದರ್ಭದಲ್ಲಿ ಎಷ್ಟು ಜನ್ಮದ ಪುಣ್ಯವೋ ಈಶನ ಸಂಕಲ್ಪವೋ ಎಂಬಂತೆ, ಮರುಭೂಮಿಯಲ್ಲಿ ಓಯಾಸಿಸ್ಸು ಕಂಡಂತೆ, ಕಾಳರಾತ್ರಿಯಲ್ಲಿ ಸೂರ್ಯ ಉದಯಿಸಿದಂತೆ, ಅನಾಥ ಮಗುವಿಗೆ ತಾಯಿ ದೊರಕಿದಂತೆ, ಶಾಂತಿ, ಸಹನೆ, ಕರುಣೆಯೇ ಮೈವೆತ್ತಿ ಬಂದಂತೆ ಬಸವಣ್ಣನವರು ಜನಿಸಿ ಬಂದರು. ಬುದ್ಧನ ಕರುಣೆ, ಮಹಾವೀರನ ಅಹಿಂಸೆ, ಏಸುವಿನ ಸೇವೆ, ಮಹಮ್ಮದನ ನಿಷ್ಠೆ, ಝುರತುಷ್ಟ್ರನ ಮಾನವೀಯತೆಗಳನ್ನು ಮೈಗೂಡಿಸಿಕೊಂಡಿದ್ದ ಮಂತ್ರಪುರುಷ ಬಸವಣ್ಣನವರು ಸಮಾಜವನ್ನು ನೋಡಿದ ದೃಷ್ಟಿ ವಿಶಿಷ್ಟವಾಗಿತ್ತು. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಕೆಳವರ್ಗದ ದುಡಿಯುವ ಜೀವಿಗಳ ಹೀನಾಯ ಬದುಕು ಪ್ರಾಣಿಗಳಿಗಿಂತಲೂ ಕಡೆಯಾಗಿದ್ದನ್ನು ಕಂಡು ಅವರ ಮನ ಮಮ್ಮಲ ಮರುಗಿತು. ಅವರನ್ನು ಪಾಪಕೂಪದಿಂದ ಮೇಲೆತ್ತಲು ಹಗಲಿರುಳು ಚಿಂತಿಸಿದರು. ಅದಕ್ಕಾಗಿ ಟೊಂಕ ಕಟ್ಟಿ ನಿಂತರು.

*'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ'* ಹುಟ್ಟು ಸಾವು ಎಲ್ಲರಿಗೂ ಒಂದೇ ಆಗಿದ್ದು, ಎಲ್ಲರೂ ಸರಿಸಮಾನರೆಂದು ಹೇಳಿ ಜಾತಿ ವರ್ಣ ವರ್ಗ ವ್ಯವಸ್ಥೆಯನ್ನು ಧಿಕ್ಕರಿಸಿದರು.

*'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,*
*ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ*
*ಕೊಯಿವೆ, ನೋಡಯ್ಯಾ ಮಹಾದಾನಿ*
*ಕೂಡಲಸಂಗಮದೇವಾ ಮಾದಾರ ಚೆನ್ನಯ್ಯನ*
*ಮನೆಯ ಮಗ ನಾನಯ್ಯಾ'*

* ೬೪೪, ಬಸವ ಚೇತನ, ರಾಮತೀರ್ಥನಗರ, ಬೆಳಗಾವಿ-೧೫. ಮೊ: ೯೪೪೮೦೪೫೫೧೪೬.

ಕರ್ಮ ಸಿದ್ಧಾಂತವನ್ನು ಬೋಧಿಸುವ ಸನಾತನ ಧರ್ಮಶಾಸ್ತ್ರಗಳ ಟೊಳ್ಳುವಾದವನ್ನು ಬಯಲಿಗೆಳೆದರು. ಸ್ವರ್ಗ ನರಕಗಳ ಕಲ್ಪನೆ, ಮೋಕ್ಷ, ಪುನರ್ಜನ್ಮ, ಭೂತಪ್ರೇತ ಹರಕೆ ಬಲಿ, ಅಂಧಶ್ರದ್ಧೆ, ಡಂಭಾಚಾರ, ಶುಷ್ಕಾಚಾರ, ಮೂಢನಂಬಿಕೆಗಳನ್ನು ಗುಡಿಸಿ ಹಾಕಿದರು. ಶೋಷಣೆಗೆ ಮೂಲವಾದ ಗುಡಿ ಸಂಸ್ಕೃತಿಯನ್ನು ತಿರಸ್ಕರಿಸಿದರು. ದೇವರು ಮತ್ತು ಭಕ್ತರ ಮಧ್ಯವರ್ತಿಗಳಾದ ಪೂಜಾರಿ ಪುರೋಹಿತರ ಮಧ್ಯಸ್ಥಿಕೆಯನ್ನು ನಿರಸನಗೈದರು.

*'ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?*
*ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?*
*ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ*
*ನಿಮ್ಮನೆತ್ತ ಬಲ್ಲರು, ಕೂಡಲಸಂಗಮದೇವಾ.*

ತನಗಾಗಿ ದೇವಪೂಜೆ, ದೇವೋಪಾಸನೆ ತಾನೇ ಮಾಡಬೇಕು. ತನ್ನ ಹಾಗೂ ದೇವನ ನಡುವೆ ಮಧ್ಯವರ್ತಿಗಳೇಕೆ? ದೇವೋಪಾಸನೆ ಎಲ್ಲರ ಹಕ್ಕು ಎಂದು ಹೇಳಿ ಉಪಾಸನೆಗೆ ಅಗಮ್ಯ ಅಗೋಚರ ಅಪ್ರತಿಮ ನಿರಾಕಾರ ದೇವನನ್ನು ಸಾಕಾರ ರೂಪವಾಗಿಸಿ, ವಿಶ್ವಾತ್ಮನ ಕುರುಹಾಗಿಸಿ ಇಷ್ಟಲಿಂಗ ರೂಪದಲ್ಲಿ ಉಪಾಸಕನ ಕೈಗೆ ತಂದಿತ್ತರು. ದೇಹವನ್ನೇ ದೇವಾಲಯವಾಗಿಸಿದರು. ಗುಡಿಗಳಲ್ಲಿರುವ ಸ್ಥಾವರಮೂರ್ತಿಗಳಲ್ಲಿ ದೇವರಿಲ್ಲ. ದೇವರು ನಮ್ಮ ದೇಹದಲ್ಲೇ ಚೈತನ್ಯಸ್ವರೂಪಿಯಾಗಿದ್ದಾನೆ. **'ತನ್ನ ತಾನರಿತು, ತಾನಾರೆಂದು ತಿಳಿದರೆ ತಾನೇ ದೇವ ನೋಡಾ'** ಎಂದು ದೇವರ ಕಲ್ಪನೆ ಕೊಟ್ಟರು. ಗುಡಿಗಳಲ್ಲಿ ಮೂರ್ತಿರೂಪ ದೇವರ ಹತ್ತಿರ ಪೂಜಾರಿ ಪುರೋಹಿತ ರಿಗೆ ಮಾತ್ರ ಪ್ರವೇಶ. ಅಲ್ಲಿ ಮಡಿ, ಮುಟ್ಟು ಮೈಲಿಗೆ ಇದೆ. ಆ ಮೂರ್ತಿರೂಪ ದೇವರುಗಳು ಪೂಜಾರಿಗಳ ಕೈಯಾಳುಗಳು ಇಷ್ಟಲಿಂಗಕ್ಕೆ ಮಡಿ, ಮುಟ್ಟು ಮೈಲಿಗೆಗಳಿಲ್ಲ. ವಿಶ್ವಾತ್ಮನ ಕುರುಹಾದ ವಿಶ್ವರೂಪದ ಇಷ್ಟಲಿಂಗ ದೃಷ್ಟಿ ಯೋಗದಲ್ಲಿ ದೇವನನ್ನು ಬಸವಣ್ಣನವರು ಸಾಕ್ಷಾತ್ಕರಿಸಿದರು.

ತನು ಮನ ಭಾವಶುದ್ಧಿಯಾಗಿ ದೈವತ್ವಕ್ಕೇರಲು ಬಸವಣ್ಣನವರು ಅಷ್ಟಾವರಣ ಪಂಚಾಚಾರ ಮತ್ತು ಷಟ್‌ಸ್ಥಲ ಸಿದ್ಧಾಂತ ತಂದರು. ಅಂತರಂಗ ಬಹಿರಂಗ ಶುದ್ಧಿಗಾಗಿ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ...' ಸಪ್ತಸೂತ್ರ ತಂದು ನಾಗರಿಕ ನೀತಿ ಸಂಹಿತೆ ರೂಪಿಸಿದರು. 'ಸತ್ಯ ನುಡಿವುದೇ ದೇವಲೋಕ, ಮಿಥ್ಯ ನುಡಿವುದೇ ಮೃತ್ಯುಲೋಕ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ಹೇಳಿ ಕಾಲ್ಪನಿಕ ದೇವಲೋಕ ಮೃತ್ಯುಲೋಕಗಳ ಭ್ರಮೆ ಬಿಡಿಸಿದರು. 'ಕಲ್ಲನಾಗರ ಕಂಡರೆ ಹಾಲನೆರೆ ಎಂಬರಯ್ಯಾ, ದಿಟ ನಾಗರ ಕಂಡರೆ ಕೊಲ್ಲೆಂಬರಯ್ಯಾ'. 'ನೀರ ಕಂಡಲ್ಲಿ ಮುಳುಗುವರಯ್ಯಾ ಮರನ ಕಂಡಲ್ಲಿ ಸುತ್ತುವರಯ್ಯಾ' ಮುಂತಾದ ನೀತಿಯುಕ್ತ ಸತ್ವಭರಿತ ವಚನಗಳನ್ನು ಬರೆದು ಜನರಲ್ಲಿ ವೈಚಾರಿಕ ಪ್ರಜ್ಞೆ ಬೆಳೆಸಿದರು. ಮೂಢನಂಬಿಕೆ, ಅಂಧಶ್ರದ್ಧೆ, ಅನಿಷ್ಟ ಸಂಪ್ರದಾಯಗಳನ್ನು ಬದಿಗೊತ್ತಿ ಸಕಲ ಜೀವಾತ್ಮರಿಗೆ ಲೇಸು ಬಯಸುವುದೇ ಮಾನವ ಧರ್ಮವೆಂದರು. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ'. ಎಂದು ಹೇಳಿ ಜನರಲ್ಲಿ ಭೃತ್ಯಾಚಾರ ಭಾವ ಬಿತ್ತಿದರು. 'ದಯವೇ ಧರ್ಮದ ಮೂಲ'ವೆಂದು ಹೇಳಿ ದಯೆಯ ಮಹತಿಯನ್ನು ಸಾರಿದರು. 'ಮೃದುವಚನವೇ ಸಕಲ ಜಪಂಗಳಯ್ಯಾ, ಮೃದು ವಚನವೇ ಸಕಲ ತಪಂಗಳಯ್ಯಾ, ಸದುವಿನಯವೇ ಸದಾಶಿವನ ಒಲುಮೆಯಯ್ಯಾ'; 'ಏನು ಬಂದಿರಿ ಹದುಳವಿದ್ದಿರೆ? ಎಂದರೆ ನಿಮ್ಮ ಐಸಿರಿ ಹಾಳಾಗುವುದೇ? ನಮ್ಮ ನಡೆನುಡಿಗಳು ಹೇಗಿರಬೇಕೆಂಬುದನ್ನು ತಿಳಿಸಿ ಸುಖಮಯ ಬದುಕಿಗೆ ದಾರಿದೀಪವಾದರು.

ಲಿಂಗ ಹಿಡಿದ ಕೈ ಬೇಡಿ ಬದುಕಬಾರದು. ದುಡಿದು ಬದುಕಬೇಕು ಎಂದು ಹೇಳಿ ಬಸವಣ್ಣನವರು ಕಾಯಕ ಸಿದ್ಧಾಂತವನ್ನು ಹುಟ್ಟು ಹಾಕಿದರು. ಕಾಯಕವೇ ಕೈಲಾಸವೆಂದು ಹೇಳಿ ಕಾಯಕದ ಮಹತ್ವ ತಿಳಿಸಿದರು. ಕರ್ಮವು ಜಡತ್ವದ ಪ್ರತೀಕವಾದರೆ ಕಾಯಕವು ಚೈತನ್ಯದ ಪ್ರತೀಕವಾಗಿದೆ. ಕಾರೆಯ ಸೊಪ್ಪಾದರೂ ಕಾಯಕ ದಿಂದಲೇ ಬಂದಿರಬೇಕು. ಕಾಯಕದಲ್ಲಿ ಮೇಲು ಕೀಳುಗಳಿಲ್ಲ. ಒಬ್ಬ ಪಾದರಕ್ಷೆ ಮಾಡುವವನ ಕಾಯಕವು ಕೂಡಾ ಒಬ್ಬ ಮಂತ್ರಿಯ ಕಾಯಕದಷ್ಟೇ ಪವಿತ್ರವಾದುದು ಎಂದು ಹೇಳಿ ಕಾಯಕಕ್ಕೆ ಉನ್ನತ ಮನ್ನಣೆ ನೀಡಿದರು.

*'ಬಾಳೆಹಣ್ಣೆಂದು ಮಧುವ ತಂದು ಕೊಡನ ತುಂಬಿದ ಜೇನಿನಂತೆ, ತಾನುಂಬುದು ಜಗವುಂಬುದು ನೋಡಯ್ಯಾ-*





ಕಾಯಕ ಜೀವಿ ಜೇನುಹುಳಗಳ ಉದಾಹರಣೆ ನೀಡಿ ಕಾಯಕದಲ್ಲಿ ಬಂದದ್ದು ದಾಸೋಹದಲ್ಲಿ ವಿನಿಯೋಗವಾಗಬೇಕೆಂದು ಬಸವಣ್ಣನವರು ಹೇಳಿದ್ದಾರೆ. ಸತ್ಯಶುದ್ಧ ಕಾಯಕದಿಂದ ಬಂದದ್ದು ಮಾತ್ರ ದಾಸೋಹಕ್ಕೆ ಸಲ್ಲುವುದೆಂದು ಹೇಳಿದ್ದಾರೆ. ಜಗತ್ತಿನ ಯಾವ ಧರ್ಮದಲ್ಲೂ ಕಾಣದ ಕಾಯಕ ದಾಸೋಹ ಸಿದ್ಧಾಂತವನ್ನು ನಮಗೆ ಕೊಟ್ಟು ಹೋಗಿದ್ದಾರೆ.

***ಇವನಾರವ, ಇವನಾರವ ಎಂದೆನಿಸದಿರಯ್ಯಾ ಇವನಮ್ಮವ ಇವನಮ್ಮವ ಎಂದೆನಿಸಯ್ಯಾ.***

ಸಮಾಜದಲ್ಲಿ ಜಾತಿ, ವರ್ಣ, ಮೇಲು–ಕೀಳು ಎಂದೆಣಿಸದೆ ಬಸವಣ್ಣನವರು ಎಲ್ಲರನ್ನು ಅಪ್ಪಿ ಆದರಿಸಿದರು. 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ' ಎಂದು ಅಸ್ಪೃಶ್ಯರೆಂದೆನಿಸಿ ಕೊಂಡವರನ್ನೂ, ತುಳಿತಕ್ಕೊಳಗಾದವರನ್ನು ಮೇಲೆತ್ತಿ ಅಪ್ಪಿಕೊಂಡು ಸಮಾಜದಲ್ಲಿ ಸಮಾನತೆ ತಂದರು. ಅನುಭವ ಮಂಟಪವನ್ನು ಅನುಷ್ಠಾನಗೊಳಿಸಿ ಯಾವುದೇ ಭೇದವೆಣಿಸದೆ ಸ್ತ್ರೀ ಪುರುಷರೆಲ್ಲ ಮುಕ್ತವಾಗಿ ಪಾಲ್ಗೊಳ್ಳುವ ಚರ್ಚೆ, ಚಿಂತನ ವೇದಿಕೆಯನ್ನು ನಿರ್ಮಿಸಿದರು. ಮಾನವ ಕಲ್ಯಾಣಕ್ಕಾಗಿ ಸುಖಿ ಸಮಾಜ ನಿರ್ಮಾಣಕ್ಕಾಗಿ ಶರಣ ಬಳಗವೆಲ್ಲ ಅಲ್ಲಿ ಸೇರಿ ಚಿಂತನ ನಡೆಸಿದರು. ಅನುಭವ ಮಂಟಪವು ಜಗತ್ತಿನ ಪ್ರಪ್ರಥಮ ಸಂಸತ್ತು ಎನ್ನಬಹುದು. ಅಲ್ಲಿ ಉಗಮವಾದ ಶರಣರ ವಿಚಾರಧಾರೆಯೇ ವಚನ ಸಾಹಿತ್ಯದ ಹೊನಲಾಗಿ ಹರಿಯಿತು. ನಡೆ ನುಡಿ ಒಂದಾದ ಶರಣರ ಸೂಳ್ನುಡಿಗಳೇ ವಚನಗಳಾದವು. ದಂಡನಾಯಕ ಬಸವಣ್ಣನವರಿಂದ ಹಿಡಿದು, ಕಸಗುಡಿಸುವ ಸತ್ಯಕ್ಕ ಸೂಳೆ ಸಂಕವ್ವೆಯವರೆಗೆ ನೂರಾರು ಶರಣ ಶರಣೆಯರು ಏಕಕಾಲಕ್ಕೆ ಈ ವಚನ ಚಳುವಳಿಯಲ್ಲಿ ಭಾಗಿಯಾಗಿ ಮೌಲಿಕ ವಚನಗಳನ್ನು ರಚಿಸಿದ್ದು ಒಂದು ಪವಾಡವೇ ಸರಿ. ವಚನದಂತೆ ವಿಶಿಷ್ಟ ಹಾಗೂ ಮೌಲಿಕ ಸಾಹಿತ್ಯ ಜಗತ್ತಿನ ಯಾವ ಭಾಷೆಯಲ್ಲೂ ಕಂಡು ಬರುವುದಿಲ್ಲ.

***'ತಾಳಮಾನ ಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ ಅಮೃತಗಣ ದೇವಗಣವನರಿಯೆ, ಕೂಡಲಸಂಗಮದೇವಾ***
***........ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ'***

ಬಸವಣ್ಣನವರ ನೇತೃತ್ವದಲ್ಲಿ ವಚನಕಾರರು ಯಾವ ಕಟ್ಟುಪಾಡಿಗೂ ಒಳಗಾಗದೇ ಮುಕ್ತವಾಗಿ ಭಾಷೆಯನ್ನು ಬಹುಳತೆಯಿಂದ ಬಳಸಿಕೊಂಡು ವಚನ ರಚಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಬಸವಣ್ಣನು ಭಾಷಾ ಜನಕನೆಂದು ಆಲೂರ ವೆಂಕಟರಾಯರು ನುಡಿದಿದ್ದಾರೆ. ವಚನಕಾರರು ಅಚ್ಚಗನ್ನಡದ ಬೇಸಾಯಕಾರರೆಂದು ಎಂ.ಆರ್. ಶ್ರೀನಿವಾಸಮೂರ್ತಿಯವರು ಕರೆದಿದ್ದಾರೆ. 'ಉಪನಿಷತ್ತಿನಲ್ಲಿರುವುದೆಲ್ಲವೂ ವಚನ ಸಾಹಿತ್ಯದಲ್ಲಿದೆ. ವಚನ ಸಾಹಿತ್ಯದಲ್ಲಿರುವುದೆಲ್ಲವೂ ಉಪನಿಷತ್ತುಗಳಲ್ಲಿಲ್ಲ' ಎಂದು ರಂಗರಾವ್ ದಿವಾಕರರು ತಮ್ಮ 'ವಚನಶಾಸ್ತ್ರ ರಹಸ್ಯ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. 'ಆಡು ಮುಟ್ಟದ ಗಿಡವಿಲ್ಲ' ಎಂಬ ನಾಣ್ಣುಡಿಯಂತೆ ಬಸವಣ್ಣನವರು ಸಮಷ್ಟಿ ಹಿತಕ್ಕಾಗಿ ಚಿಂತಿಸದ ವಿಷಯಗಳೇ ಇಲ್ಲವೆನ್ನಬಹುದು. ಅವರೊಬ್ಬ ಯುಗದ ಉತ್ಸಾಹಿಗಳಾಗಿದ್ದರು. ಸಮಕಾಲೀನ ಹಾಗೂ ನಂತರದ ಶರಣರು ದಾರ್ಶನಿಕರು ಕವಿಗಳೆಲ್ಲರೂ ಬಸವಣ್ಣ ನವರನ್ನು ಸ್ತುತಿಸಿದ್ದಾರೆ.

***'ಬಸವ ಕೀರ್ತಿಗಳಿಂದರಿ ಕಿವಿಗಳೆಲ್ಲ ತಣಿಯೆ, ಬಸವನಾ ಲೋಕದಿಂ ಲೋಚನಂಗಳ್ತಣಿಯೆ***
***ಬಸವನ ಸ್ತುತಿಗಳಿಂ ನಾಲಗೆಗಳುಂ ತಣಿಯೆ, ಬಸವನ ನೆನಹಿನಿಂದೆ ಎಲ್ಲರ ಮನಂ ತಣಿಯೆ'***
***ಬಸವ ದರುಶನದಿಂದಮೆಲ್ಲರಂಗಂ ತಣಿಯೆ'***

ಹರಿಹರ ಕವಿಯು ಬಸವೇಶ್ವರ ರಗಳೆಯಲ್ಲಿ ಅವರನ್ನು ತುಂಬಾ ಕೊಂಡಾಡಿದ್ದಾನೆ.

***'ಕಾರ್ತೀಕದ ಕತ್ತಲಲ್ಲಿ ಆಕಾಶದೀಪವಾಗಿ ನೀ ಬಂದೆ ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ ನಿಂದೆ'.***

ರಾಷ್ಟ್ರಕವಿ ಕುವೆಂಪುರವರು ಬಸವಣ್ಣನವರನ್ನು ಸ್ತುತಿಸುತ್ತ ಅವರ ತತ್ವಗಳನ್ನು ತಾವು ಆಚರಣೆಯಲ್ಲಿ ತಂದಿದ್ದರೆ, ವಿದೇಶಿ ಧರ್ಮಗಳು ನಮ್ಮ ದೇಶದಲ್ಲಿ ಕಾಲಿಡುತ್ತಿರಲಿಲ್ಲವೆಂದು ಹೇಳಿದ್ದಾರೆ. Basava was the only free thinker of India ಬಸವಣ್ಣನೊಬ್ಬನೇ ಭಾರತದ ಸ್ವತಂತ್ರ ವಿಚಾರವಾದಿ ಎಂದು ಪಾಶ್ಚಾತ್ಯ ತತ್ವಜ್ಞಾನಿ ಅರ್ಥರ್ ಮೈಲ್ಸ್ ಹೇಳಿದ್ದಾನೆ. ಆಧುನಿಕ ಸುಧಾರಕರೆಲ್ಲ ಬಸವಣ್ಣನ ವಿಚಾರಗಳನ್ನೇ ಮಾರ್ನುಡಿಯುತ್ತಾರೆ ಎಂದು ಇನ್ನೊಬ್ಬ ವಿದ್ವಾಂಸ ಕ್ಯಾಂಪಬೆಲ್ಲನು

ನುಡಿದಿದ್ದಾನೆ. ೮೦೦ ವರ್ಷಗಳ ಹಿಂದೆಯೇ ಪ್ರಜಾಪ್ರಭುತ್ವದ ಬೀಜ ಬಿತ್ತಿದವ ಬಸವಣ್ಣನು' ಎಂದು ಬ್ರಿಟನ್ನಿನ ಖ್ಯಾತ ಇತಿಹಾಸಕಾರ ರಿಚರ್ಡ್ ಬ್ಲರ್ಟನ್ ಹೇಳಿದ್ದಾನೆ. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಗಾಂಧೀಜಿಯವರು ಮಹಾ ಮಾನವತಾವಾದಿ ಬಸವಣ್ಣನವರು ಹುಟ್ಟಿದ ನಾಡಿನವರಾದ ನೀವು ಅವರ ಆದರ್ಶಗಳನ್ನು ಸಾಧಿಸಿಕೊಂಡರೆ ಕರ್ನಾಟಕವನ್ನಷ್ಟೇ ಏಕೆ ಇಡೀ ಜಗತ್ತನ್ನು ಉದ್ಧರಿಸಬಲ್ಲಿರಿ' ಎಂದು ಕನ್ನಡಿಗರಿಗೆ ಸಂದೇಶ ನೀಡಿದ್ದಾರೆ.

ಬಸವಣ್ಣನವರು ಬುದ್ಧನಂತೆ ಸಂಸಾರ ತ್ಯಾಗ ಮಾಡಲಿಲ್ಲ. ಮಹಾವೀರನಂತೆ ದೇಹವನ್ನು ದಂಡಿಸಲಿಲ್ಲ. ಋಷಿಮುನಿಗಳಂತೆ ಅರಣ್ಯವಾಸಿಯಾಗಲಿಲ್ಲ. ನಮ್ಮ ನಿಮ್ಮಂತೆ ಸಂಸಾರಿಯಾಗಿಯೇ ಇದ್ದುಕೊಂಡು ಮಂತ್ರಿ ಹುದ್ದೆಯಲ್ಲಿದ್ದರೂ ದೀನ ದಲಿತರ ತುಳಿತಕ್ಕೊಳಗಾದ ಕಾಯಕ ಜೀವಿಗಳ ಮಧ್ಯದಲ್ಲಿದ್ದು ಮನುಕುಲದ ಉದ್ಧಾರಕ್ಕೆ ತಮ್ಮನ್ನು ಅರ್ಪಿಸಿಕೊಂಡರು. ಯುಗಾವತಾರಿ ಬಸವಣ್ಣನವರ ಕನಸಿನ ಕಲ್ಯಾಣ ರಾಜ್ಯ ಇಂದು ಮತ್ತೆ ಉದಯವಾಗಬೇಕಿದೆ.

### ಆಧುನಿಕ ವಚನ

**ಕೀರ್ತಿ**

ಸೂರ್ಯ ಲೋಕಕೆ ಬೆಳಕು ನೀಡಿದರೂ
ಕೀರ್ತಿಗಾಗಿ ಹಂಬಲಿಸಲಿಲ್ಲ
ಚಂದ್ರ ಬೆಳದಿಂಗಳ ಚೆಲ್ಲಿದರೂ ಕೀರ್ತಿಗಾಗಿ
ಬಯಸಲಿಲ್ಲ
ಗಂಗೆ ಜೀವಕೋಟಿಗಳ ದಾಹ ದಣಿಸಿದರೂ
ಕೀರ್ತಿ ಬಯಸಲಿಲ್ಲ
ವಾಯು ಸಕಲ ಜೀವಿಗಳಿಗೆ ಪ್ರಾಣವಾಯು
ನೀಡಿದರೂ ಕೀರ್ತಿಗೆ ಕಾಯಲಿಲ್ಲ
ಮರಗಳೂ ತಂಪು ನೀಡಿದರೂ ಹೆಸರು ಬಯಸಲಿಲ್ಲ
ಭೂತಾಯಿ ತಾ ಮಾಡುವ ತ್ಯಾಗಕೆ ಪ್ರತಿಫಲ
ಬಯಸಲಿಲ್ಲ
ಮನುಜ ಏಕೆ ಸದಾ ಕೀರ್ತಿಯ ಕಾಮನೆಯ
ಬೆನ್ನಹತ್ತುವದ ಕಂಡು ವಿಷಾದವೆನಿಸಿದೆ
ಹರಳೂರು ಶ್ರೀ ವೀರಭದ್ರ ಪ್ರಭುವೆ.

– ಎಚ್.ಎಸ್. ಸಿದ್ಧಗಂಗಪ್ಪ

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗಿದೆ.

ಪ್ರಾರಂಭಕ್ಕೆ ೫೦೦/- ರೂ. ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ. ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ನಿಮ್ಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ಸಂಖ್ಯೆ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ, 'ಸಿದ್ಧಗಂಗಾ' ಮುನ್ನಡೆಗೆ ಬಾಕಿ ಹಣ ಸಂದಾಯ ಮಾಡಿ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





ಶ್ರೀ ಸಿದ್ಧಗಂಗಾ ಮಠ ಸೇವಾಸಂಸ್ಥೆಯೆಂದು ಜನಜನಿತವಾಗಿರುವುದು ತಮಗೆ ತಿಳಿದಿರುವ ವಿಷಯವಾಗಿದೆ. ನಾಡಿನಲ್ಲಿ ತ್ರಿವಿಧ ದಾಸೋಹ ಕ್ಷೇತ್ರವೆಂದೇ ಪ್ರಸಿದ್ಧಿಯಾಗಿರುವ ಶ್ರೀಮಠದ ಸೇವಾಮುಖಗಳು ಹಲವು. ದೀನದಲಿತ, ಅನಾಥ ಮಕ್ಕಳಿಗೆ ಆಶ್ರಯ ನೀಡಿ ಶಿಕ್ಷಣ ಸೌಲಭ್ಯ ಒದಗಿಸಿ ಅವರ ಬದುಕಿಗೆ ಮಾರ್ಗ ತೋರುತ್ತಿರುವುದನ್ನು ತಾವು ಬಲ್ಲವರಾಗಿದ್ದೀರಿ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಅವಿರತವಾದ ನಿಷ್ಕಾಮ ಕಾಯಕದಿಂದ ಶ್ರೀಮಠ ಮಹತ್ತುಗಳನ್ನು ಸಾಧಿಸಿದ ಪವಿತ್ರ ಕ್ಷೇತ್ರವಾಗಿದೆ. ರಾಷ್ಟ್ರದ ಅಮೂಲ್ಯ ಸಂಪತ್ತಾಗಿದೆ.

ಶ್ರೀಕ್ಷೇತ್ರದ ಮುಖವಾಣಿಯಾದ **'ಸಿದ್ಧಗಂಗಾ'** ಮಾಸಿಕ ಪತ್ರಿಕೆ ೧೯೬೫ರಿಂದ ನಡೆದುಬರುತ್ತಿರುವುದು ತಮಗೆ ತಿಳಿದಿರುವ ವಿಚಾರ. ಧಾರ್ಮಿಕ, ಶೈಕ್ಷಣಿಕ, ವೈಚಾರಿಕ, ವೈಜ್ಞಾನಿಕ ಮತ್ತು ಪ್ರಚಲಿತ ಸಮಸ್ಯೆಗಳನ್ನು ಕುರಿತ ಲೇಖನಗಳನ್ನು ಪ್ರಕಟಿಸುತ್ತ ಬಂದಿದ್ದು, ರಾಜ್ಯದ ಪತ್ರಿಕಾ ಅಕಾಡೆಮಿಯಿಂದ ಪ್ರಶಸ್ತಿಯನ್ನು ಪಡೆದಿರುವುದನ್ನು ತಿಳಿಸಲು ಹೆಮ್ಮೆ ಎನಿಸುತ್ತದೆ.

ಪತ್ರಿಕಾ ಪ್ರಪಂಚ ಮುನ್ನಡೆಯುತ್ತಿರುವುದು ಜಾಹಿರಾತುಗಳ ಬೆಂಬಲದಿಂದ ಎಂಬುದನ್ನು ವಿಮನ್ರವಾಗಿ ತಮ್ಮ ಗಮನಕ್ಕೆ ತರಲಾಶಿಸುತ್ತೇವೆ. ತಾವು ಹಾಗೂ ಇನ್ನೂ ಅನೇಕ ಉದ್ದಿಮೆಗಳವರು 'ಸಿದ್ಧಗಂಗಾ'ಕ್ಕೆ ಜಾಹಿರಾತನ್ನು ನೀಡುವುದರ ಮೂಲಕ ಪ್ರೋತ್ಸಾಹಿಸುತ್ತ ಬಂದಿರುವುದನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇವೆ. ಜಾಹಿರಾತು ಆಧುನಿಕ ಜಗತ್ತಿನ ಪ್ರಬಲ ಮಾಧ್ಯಮವಾಗಿದೆ. ಪ್ರಚಾರದಿಂದ ವಿಚಾರದೀಪ್ತಿ ಬೆಳಗಬೇಕು. ತಮ್ಮ ಸಂಸ್ಥೆಯ ವತಿಯಿಂದ ಜಾಹಿರಾತನ್ನು 'ಸಿದ್ಧಗಂಗಾ'ಕ್ಕೆ ನೀಡುವುದರ ಮೂಲಕ ಪತ್ರಿಕೆಯ ಮುನ್ನಡೆಗೆ ಸಹಕಾರ ನೀಡಬೇಕೆಂದು ಪ್ರಾರ್ಥಿಸುತ್ತೇವೆ.

ಜಾಹಿರಾತು ನಿರಂತರ ಪ್ರಕಟವಾಗುವಂತೆ ತಮ್ಮ ಸಂಸ್ಥೆಯ ಪ್ರಚಾರಕ್ಕೆ ಸಿದ್ಧಗಂಗಾ ಕಂಕಣಬದ್ಧವಾಗಿದೆಯೆಂಬುದನ್ನು ತಿಳಿಸಲಿಚ್ಛಿಸುತ್ತೇನೆ. ಆಜೀವ ಜಾಹಿರಾತು ಸದಸ್ಯತ್ವವನ್ನು ತಾವು ತೆಗೆದುಕೊಳ್ಳುವುದರ ಮೂಲಕ **'ಸಿದ್ಧಗಂಗಾ'** ಪತ್ರಿಕೆಯನ್ನು ಬೆಂಬಲಿಸಬೇಕಾಗಿ ವಿನಂತಿಸುತ್ತೇವೆ. ಜಾಹಿರಾತಿನ ತಾಂತ್ರಿಕ ವಿವರಗಳನ್ನು ತಿಳಿಸಿದೆ. ಜಾಹಿರಾತಿನ ವಿಷಯವನ್ನು ಡಿ.ಟಿ.ಪಿ. ಪ್ರತಿ/ಸಿ.ಡಿ. ಮತ್ತು **ಜಾಹಿರಾತು ಮೊಬಲಗನ್ನು 'ಅಧ್ಯಕ್ಷರು, ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪. ದೂ: ೦೮೧೬-೨೨೮೨೩೨೨'** ಈ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ. ಇ-ಮೇಲ್: siddaganganews@gmail.com

### ತಾಂತ್ರಿಕ ವಿವರಗಳು

| | |
|---|---|
| ಪತ್ರಿಕೆಯ ಆಕಾರ | : 1/4 ಕ್ರೌನ್ |
| ಭಾಷೆ | : ಕನ್ನಡ |
| ಪತ್ರಭಾಗ | : ಕಪ್ಪು-ಬಿಳುಪು |
| ರಕ್ಷಾಪುಟ | : ಬಹುವರ್ಣ |
| ಒಟ್ಟು ಪುಟಗಳು | : 32 + 4 = 36 |

### ಜಾಹಿರಾತು ವಿವರ

| | | |
|---|---|---|
| ರಕ್ಷಾಪುಟ ಹೊರಭಾಗ (4 ವರ್ಣಗಳಲ್ಲಿ) | – | ರೂ. 30,000 |
| ರಕ್ಷಾಪುಟ ಒಳಭಾಗ (4 ವರ್ಣಗಳಲ್ಲಿ) | – | ರೂ. 20,000 |
| ಒಳಗಿನ ಪೂರ್ಣಪುಟಕ್ಕೆ | – | ರೂ. 10,000 |
| ಒಳಗಿನ ಅರ್ಧಪುಟಕ್ಕೆ | – | ರೂ. 5,000 |
| ಒಳಗಿನ ಕಾಲುಪುಟಕ್ಕೆ | – | ರೂ. 2,500 |

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವ ಆಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಮಠ, ತುಮಕೂರು - 572 104

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1937 ನೇ ಶ್ರೀ ಮನ್ಮಥನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ ಸಪ್ತಮಿ | 01-03-2016 | ಮಂಗಳವಾರ | | ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವ ಮತ್ತು |
| | | | ರಾತ್ರಿ | **ಶೂನ್ಯ ಸಿಂಹಾಸನಾರೋಹಣೋತ್ಸವ** |
| | | | | ವೃಷಭ ವಾಹನ |
| ಮಾಘ ಬಹುಳ ಅಷ್ಟಮಿ | 02-03-2016 | ಬುಧವಾರ | ರಾತ್ರಿ | ನಂದಿವಾಹನ ಮತ್ತು ಗಜ ವಾಹನ |
| ಮಾಘ ಬಹುಳ ನವಮಿ | 03-03-2016 | ಗುರುವಾರ | -,,- | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ ದಶಮಿ | 04-03-2016 | ಶುಕ್ರವಾರ | -,,- | ಹುತ್ತದವಾಹನ ಮತ್ತು ಶೇಷವಾಹನ |
| ಮಾಘ ಬಹುಳ ಏಕಾದಶಿ | 05-03-2016 | ಶನಿವಾರ | -,,- | ಅಶ್ವವಾಹನ ಮತ್ತು ನವಿಲು ವಾಹನ |
| ಮಾಘ ಬಹುಳ ದ್ವಾದಶಿ | 06-03-2016 | ಭಾನುವಾರ | -,,- | ರಾವಣವಾಹನ, ಬಿಲ್ವವೃಕ್ಷವಾಹನ ಮತ್ತು |
| | | | | ನವರಂಗಪಾಲಕಿ ಉತ್ಸವ |
| ಮಾಘ ಬಹುಳ ತ್ರಯೋದಶಿ | 07-03-2016 | ಸೋಮವಾರ | -,,- | ಮಹಾಶಿವರಾತ್ರಿ ಪೂಜಾದಿಗಳು, |
| | | | | ಬೆಳ್ಳಿರಥೋತ್ಸವ |
| | | | | ಮುತ್ತಿನ ಪಾಲಕಿ ಉತ್ಸವ |
| ಮಾಘ ಬಹುಳ ಚತುರ್ದಶಿ | 08-03-2016 | ಮಂಗಳವಾರ | | **ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮಹಾ ರಥೋತ್ಸವ** |
| | | | | ರುದ್ರಾಕ್ಷಿ ಮಂಟಪೋತ್ಸವ |
| ಮಾಘ ಬಹುಳ ಅಮಾವಾಸ್ಯೆ | 09-03-2016 | ಬುಧವಾರ | ರಾತ್ರಿ | **11ಗಂಟೆಗೆ ಬೆಳ್ಳಿಪಾಲಕಿ ಉತ್ಸವ** |
| ಫಾಲ್ಗುಣ ಶುದ್ಧ ಬಿದಿಗೆ | 10-03-2016 | ಗುರುವಾರ | -,,- | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ ದಿನಾಂಕ 01-03-2016 ಮಂಗಳವಾರದಿಂದ ಎತ್ತುಗಳ ಪರಿಷೆಯು ಪ್ರಾರಂಭವಾಗುತ್ತದೆ. ದನಗಳ ಪ್ರದರ್ಶನ ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ ಇರುತ್ತದೆ. ಪ್ರತಿದಿನ ಸಂಜೆ ಸಾಮೂಹಿಕ ಪ್ರಾರ್ಥನೆ ನಂತರ ವಿದ್ವಾಂಸರಿಂದ ಧಾರ್ಮಿಕ ಉಪನ್ಯಾಸಗಳು ಹಾಗೂ "ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ" ದಲ್ಲಿ ಪ್ರತಿದಿನವೂ ಸಾಯಂಕಾಲ "ಸಾಂಸ್ಕೃತಿಕ ಚಟುವಟಿಕೆಗಳೂ" ನಡೆಯುತ್ತವೆ. ಸರ್ವರೂ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ

ಶ್ರೀ.ಮ.ನಿ.ಪ್ರ.ಸ್ವ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳು
ಶ್ರೀ ಸಿದ್ಧಗಂಗಾಮಠ.

ಶ್ರೀ ಸಿದ್ಧಲಿಂಗಸ್ವಾಮಿಗಳು
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ.





# ನಮ್ಮ ಗಣರಾಜ್ಯ ಎತ್ತ ಸಾಗಿದೆ ?

*(ಕಳೆದ ಸಂಚಿಕೆಯಿಂದ)*

– ಪ್ರೊ. ಬರಗೂರು ರಾಮಚಂದ್ರಪ್ಪ*

ನಮ್ಮ ಗಣರಾಜ್ಯದಲ್ಲಿ ಪ್ರಾಚೀನ ರಾಜ್ಯವ್ಯವಸ್ಥೆಯ ಪಾಳ್ಳೇಗಾರಿ ಪ್ರವೃತ್ತಿಯು ಆಧುನಿಕ ರಾಜಕೀಯ ಮುಖದ ಮೂಲಕವೂ ಉಳಿದುಕೊಂಡು ಬರುತ್ತಿರುವುದಕ್ಕೆ ವ್ಯಕ್ತಿ ಪ್ರಧಾನ ರಾಜಕೀಯ ಒಂದು ಉತ್ತಮ ಉದಾಹರಣೆ. ಆಧುನಿಕ ರಾಜಕಾರಣದ ಪ್ರಮುಖ ಬೆಳವಣಿಗೆ ಎಂದರೆ ರಾಜಕೀಯ ಪಕ್ಷಗಳ ಉದಯ. ಇದನ್ನು ರಾಜಕೀಯ ವಿಜ್ಞಾನಿ ಸಾಮ್ಯುಯಲ್ ಹಂಟಿಂಗ್‌ಬನ್ ಹೀಗೆ ಹೇಳುತ್ತಾರೆ, '*'ರಾಜಕೀಯ ಆಧುನಿಕೀಕರಣ ಮೂಲಭೂತ ಅಂಶ ವೆಂದರೆ ಹಳ್ಳಿ ಪಟ್ಟಣಗಳನ್ನೂ ದಾಟಿ ವಿವಿಧ ಸಾಮಾಜಿಕ ಗುಂಪುಗಳು ರಾಜಕೀಯದಲ್ಲಿ ಪಾಲ್ಗೊಳ್ಳುವಂತೆ ಆದದ್ದು. ಇದರಿಂದ ರಾಜಕೀಯ ಪಕ್ಷಗಳಂಥ ರಾಜಕೀಯ ಸಂಸ್ಥೆ ಗಳು ಬೆಳೆದು ಈ ಪಾಲ್ಗೊಳ್ಳುವಿಕೆಯನ್ನು ಸಂಘಟಿಸು ವಂತಾಯಿತು".* ಹೀಗೆ ರಾಜಕೀಯ ಆಧುನಿಕೀಕರಣದಿಂದ ರಾಜಕೀಯ ಪಕ್ಷಗಳು ಬೆಳೆದು ಬಂದದ್ದಲ್ಲದೆ ಇನ್ನೊಂದು ಮುಖ್ಯ ಸಂಗತಿಯು ರಾಜಕೀಯ ವ್ಯಾಪ್ತಿಗೆ ಬಂತು. ಹಂಟಿಂಗ್‌ಬನ್ ಹೇಳುವಂತೆ *"ಎಲ್ಲಾ ಸಾಮಾಜಿಕ ಗುಂಪುಗಳು–ಅಂದರೆ, ಹಳೆಯ, ಹೊಸ, ಸಾಂಪ್ರದಾಯಿಕ, ಆಧುನಿಕ–ಎಲ್ಲವೂ ಸಮೂಹಗಳಾಗಿ ಜಾಗೃತಗೊಂಡು ಇನ್ನೊಂದು ಸಮೂಹಕ್ಕೆ ಸಂಬಂಧಿಸಿದಂತೆ ತಂತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುತ್ತವೆ."*

ಇಂಥ ಸಂದರ್ಭದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಬಲಶಾಲಿಯಾದ ಸಮೂಹ ಸಹಜವಾಗಿಯೇ ತನ್ನ ಹಿತಾಸಕ್ತಿಯನ್ನು ಸಮರ್ಥವಾಗಿ ರಕ್ಷಿಸಿಕೊಳ್ಳುತ್ತದೆ. ನಮ್ಮ ಗಣರಾಜ್ಯದಲ್ಲಿ ಸರ್ಕಾರವನ್ನು ನಿಯಂತ್ರಿಸುವ ಶಕ್ತಿಯನ್ನು ಪಡೆಯುತ್ತದೆ. ಇದು ಪ್ರಜಾಪ್ರಭುತ್ವದ ಶಕ್ತಿಯನ್ನು ಕುಗ್ಗಿಸುತ್ತದೆಯಾದರೂ ಆ ದಿಕ್ಕಿನತ್ತ ಒತ್ತು ಬೀಳದಂತೆ ಎಚ್ಚರ ವಹಿಸಲಾಗುತ್ತದೆ. ಹೀಗಾಗಿ ಎಲ್ಲವು 'ಪ್ರಜಾಪ್ರಭುತ್ವದದ ಅನಿವಾರ್ಯ'ಗಳೆಂದು ಒಪ್ಪಿಕೊಳ್ಳುವ ವಾತಾವರಣ ನಿರ್ಮಿತವಾಗುತ್ತದೆ. ಪಾಳ್ಳೇಗಾರಿ ವ್ಯಕ್ತಿ ಪ್ರಾಧಾನ್ಯತೆ ಎದ್ದು ಕಾಣುತ್ತದೆಯಾದರೂ ಇದನ್ನೂ ಸ್ವಾಭಾವಿಕ ಅನಿವಾರ್ಯವೆಂಬಂತೆ ಪ್ರಚುರಪಡಿಸಲಾಗುತ್ತದೆ. ಹೀಗಾಗಿ ನಮ್ಮ ಗಣರಾಜ್ಯದಲ್ಲಿ ರಾಜಕೀಯ ಪಕ್ಷಗಳು ಸೈದ್ಧಾಂತಿಕೆಯನ್ನು ರೂಪಿಸಿ, ರೂಢಿಸಿಕೊಳ್ಳುವ ಕ್ರಿಯೆಗಿಂತ ಹೀರೋಗಳನ್ನು ರೂಪಿಸಿ ವಿಜೃಂಭಿಸುವ ಕೆಲಸಕ್ಕೆ ಶಾಮೀಲಾಗುತ್ತದೆ. ರಾಜಶಾಹಿ, ಪಾಳ್ಳೇಗಾರಿ ಪದ್ಧತಿಗಳ ಹಿನ್ನೆಲೆಯುಳ್ಳ ನಮ್ಮ ಮನಸ್ಸು ಅದರಿಂದ ಇನ್ನೂ ಸಂಪೂರ್ಣವಾಗಿ ಬಿಡುಗಡೆ ಹೊಂದಲು ಸಾಧ್ಯವಾಗಿಲ್ಲ. ಆಧುನಿಕ ಬೆಳವಣಿಗೆಯಿಂದ ನಮ್ಮ ಸಮಾಜದ ಆರ್ಥಿಕ ಸಂಬಂಧಗಳು ಸ್ವಲ್ಪ ಬದಲಾಗಿದ್ದರೂ, ಖಾಸಗಿ ಒಡೆತನ ಮತ್ತು ನಿಯಂತ್ರಣಗಳು ಬಲವಾಗಿಯೇ ಇವೆ. ಸಂವಿಧಾನದ ಆಸ್ತಿಯ ಹಕ್ಕು ಉಳ್ಳವರಿಗೆ 'ವರ'ವಾಗಿ ಪರಿಣಮಿಸಿದೆ. ಆಸ್ತಿವಂತರು ದೇಶದ ಉತ್ಪಾದನೆಯ ಮೇಲೆ ಹಿಡಿತ ಸಾಧಿಸಿ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ತಮ್ಮ ಪರವಾಗಿ ಒಗ್ಗಿಸಿಕೊಳ್ಳುತ್ತಾರೆ.

ಖಾಸಗಿ ಒಡೆತನ ಎನ್ನುವುದು ವ್ಯಕ್ತಿ ಪ್ರಧಾನ ನೆಲೆಯನ್ನು ಒಳಗೊಂಡ ಪರಿಕಲ್ಪನೆ. ಆದ್ದರಿಂದ ಇಂದಿನ ನಮ್ಮ ಗಣರಾಜ್ಯದಲ್ಲಿ ಖಾಸಗಿ ಆಸ್ತಿಯ ವಿಸ್ತರಣೆ, ವ್ಯಕ್ತಿ ಪ್ರಧಾನ ರಾಜಕಾರಣ–ಎರಡೂ ವಿಜೃಂಭಿಸುತ್ತಿವೆ. ವಿವಿಧ ಮಾಧ್ಯಮಗಳು ಪ್ರಜಾಪ್ರಭುತ್ವದ ಹೆಸರಿನಲ್ಲೇ ಇಂಥ ಪ್ರವೃತ್ತಿಯನ್ನು ಪೋಷಿಸುತ್ತಿವೆ. ಇದು ಎಷ್ಟರಮಟ್ಟಿಗೆ ನಡೆಯುತ್ತಿದೆಯೆಂದರೆ ಮಧ್ಯಪಂಥೀಯ ಪಕ್ಷಗಳಲ್ಲಿ ಆಂತರಿಕ ಪ್ರಜಾಪ್ರಭುತ್ವವೆನ್ನುವುದು ಉಳಿದಿಲ್ಲ; ಮುಖ್ಯಮಂತ್ರಿ, ಪ್ರಧಾನಮಂತ್ರಿಗಳ ಆಯ್ಕೆಯಲ್ಲಿ ಕಾಂಗ್ರೆಸ್ಸಾಗಲೀ, ಜನತಾದಳವಾಗಲಿ ರಹಸ್ಯ ಮತದಾನವನ್ನು ಅನುಸರಿಸುತ್ತಿಲ್ಲ. ರಹಸ್ಯ ಮತದಾನದ ಕ್ರಮಕ್ಕೆ ಒತ್ತಾಯಿಸುವವರು ಮತ್ತು ವ್ಯಕ್ತಿ ಪ್ರಾಧಾನ್ಯತೆಯನ್ನು ಖಂಡಿಸುವವರು (ಈ ಎರಡೂ ಪಕ್ಷಗಳಲ್ಲಿ ಮತ್ತು ಮಾಧ್ಯಮಗಳಲ್ಲಿ) ಖಳನಾಯಕರಾಗಿ ಬಿಡುತ್ತಾರೆ! ಇಷ್ಟಾದರೂ ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ! ಪ್ರಜಾಪ್ರಭುತ್ವದ ತಾತ್ವಿಕತೆ ಹಾಗಿರಲಿ, ತಾಂತ್ರಿಕತೆಯನ್ನೂ

* 275, 11 ಬಿ.ಕ್ರಾಸ್, 14ನೇ ಮೇನ್ ಜೆ.ಪಿ. ನಗರ, 2ನೇ ಹಂತ, ಬೆಂಗಳೂರು – 560 078. ಮೊ : 8147514262

ಪೂರೈಸಲಾಗದೆ 'ಸರ್ವಾನುಮತ' ದ ಸೋಗಿನಲ್ಲಿ ಸೊರಗಿ ಹೋಗುತ್ತಿರುವ ಇಂಥ ರಾಜಕೀಯ ಪಕ್ಷಗಳು ಸೈದ್ಧಾಂತಿಕ ನೋಟಗಳನ್ನು ತಮ್ಮ ಕೇಂದ್ರ ಪ್ರಜ್ಞೆಯಾಗಿಸಿಕೊಳ್ಳುವ ಮಾತು ದೂರವೇ ಉಳಿದಿದೆ. ಸೈದ್ಧಾಂತಿಕತೆಯ ಕೇಂದ್ರಪ್ರಜ್ಞೆಯುಳ್ಳ ಪಕ್ಷಗಳಲ್ಲಿ ಎಡಪಂಥೀಯತೆ ಕಂಡ ಕೂಡಲೇ ಕೆಂಡವಾಗುವ ಕಣ್ಣುಗಳು ನಮ್ಮಲ್ಲಿವೆ; ಎಡ ಪಂಥೀಯತೆಯೋ ಬಲಪಂಥೀಯತೆಯೋ ಒಟ್ಟಿನಲ್ಲಿ ಒಂದು ಸೈದ್ಧಾಂತಿಕ ಸಂಘರ್ಷದ ನೆಲೆಯನ್ನಾದರೂ ಕಾಣಬೇಕೆಂಬ ಹಂಬಲ ನಮ್ಮ ಅನೇಕ ಬುದ್ಧಿವಂತರಿಗೆ ಇಲ್ಲ; ನಮ್ಮ ಮಾಧ್ಯಮಗಳಿಗೂ ಸೈದ್ಧಾಂತಿಕತೆಯಲ್ಲಿ 'ರೋಚಕತೆ' ಕಾಣುವುದಿಲ್ಲ. ತಾತ್ವಿಕತೆಯೆನ್ನುವುದೇ ಶುಷ್ಕವಾಗಿ ಕಾಣುವ ಮನಸ್ಥಿತಿಯೊಂದು ನಿರ್ಮಾಣವಾಗುತ್ತಿರುವುದು, ನಿಜಕ್ಕೂ ಅನಾರೋಗ್ಯಕರವಾದುದು. ಇಂಥ ಅನಾರೋಗ್ಯಕರ ಮನಸ್ಸಿನ ಹಿಂದೆ ಯಥಾಪ್ರಕಾರ ನಮ್ಮ ಸಾಮಾಜಿಕ-ಆರ್ಥಿಕ ನೆಲೆಗಳ ಸಾಂಪ್ರದಾಯಿಕ ಸೆಳೆತವಿರುತ್ತದೆ. ವ್ಯಕ್ತಿವೈಭವೀಕರಣಕ್ಕೆ ಒತ್ತೆಯಾಳುಗಳಾಗುವ ಮನಸ್ಸು ಮತ್ತು ಮೆದುಳುಗಳು ಪ್ರಜಾಸತ್ತಾತ್ಮಕ ಮೌಲ್ಯದ ಮಾತನ್ನೇ ಬಾಯಿಪಾಠ ಒಪ್ಪಿಸುವುದು ಎಂಥ ವಿಪರ್ಯಾಸ!

ನಿಜ, ಯಾವುದೇ ಪಕ್ಷಕ್ಕೆ ನಾಯಕತ್ವ ಬೇಕು. ಆದರೆ ಪಕ್ಷದಿಂದ ನಾಯಕತ್ವವೊ ನಾಯಕತ್ವದಿಂದ ಪಕ್ಷವೋ ಎನ್ನುವುದು ಇಲ್ಲಿನ ಪ್ರಶ್ನೆ. ಪಕ್ಷ ಮತ್ತು ಪಕ್ಷದ ಸೈದ್ಧಾಂತಿಕ ಪ್ರತಿನಿಧಿಯಾಗಿ ನಾಯಕನಿರಬೇಕೇ ಹೊರತು ನಾಯಕನೇ ಸರ್ವಸ್ವವಾಗಿ ಆತನಿಂದಲೇ ಪಕ್ಷ-ಎಂಬಂಥ ಸ್ಥಿತಿ ನಿರ್ಮಾಣವಾಗುವುದು ಅಪಾಯಕರ.

ನಮ್ಮ ಗಣರಾಜ್ಯದಲ್ಲಾದ ಇನ್ನೊಂದು ಅನಾರೋಗ್ಯಕರ ಬೆಳವಣಿಗೆಯೆಂದರೆ ಪಕ್ಷಕ್ಕಿಂತ ಸರ್ಕಾರವೇ ಮುಖ್ಯವಾಗುವುದು. ನಿರ್ದಿಷ್ಟ ಪಕ್ಷವೊಂದು ಬಹುಮತ ಪಡೆದು ಸರ್ಕಾರವನ್ನು ರಚಿಸಿದಾಗ ಪಕ್ಷದ ನಿರ್ದೇಶನಕ್ಕನುಗುಣವಾಗಿ ಕಾರ್ಯನಿರ್ವಹಿಸುವ ಹೊಣೆ ಸರ್ಕಾರದ್ದಾಗಿರುತ್ತದೆ. ಯಾಕೆಂದರೆ ಜನರು ಪಕ್ಷವನ್ನು ಆಯ್ಕೆ ಮಾಡಿರುತ್ತಾರೆ. ಆದರೆ ಸರ್ಕಾರದ ರಚನೆಯಾದ ಕೂಡಲೇ ಮುಖ್ಯಮಂತ್ರಿ ಅಥವಾ ಪ್ರಧಾನಮಂತ್ರಿಯು ತನ್ನ ಪಕ್ಷದ ಪ್ರತಿ ವಹಿವಾಟಿನ ಮೇಲೂ ನಿಯಂತ್ರಣ ಸಾಧಿಸಿ ಬಿಡುತ್ತಾನೆ. ಪಕ್ಷದ ಅಧ್ಯಕ್ಷ ಮತ್ತಿತರ ಪದಾಧಿಕಾರಿಗಳಿಗೆ ತಾಂತ್ರಿಕ ಅಸ್ತಿತ್ವ ಮಾತ್ರ ಇರುತ್ತದೆ. ಅಧಿಕಾರ ಕೇಂದ್ರಿತ ರಾಜಕೀಯದ ಅಪಾಯಕಾರಿ ಮುಖಕ್ಕೆ ಇನ್ನೊಂದು ಉದಾಹರಣೆ. ಅಷ್ಟೇ ಅಲ್ಲ, ಪಾಳ್ಳೇಗಾರಿ ಪ್ರಜಾಪ್ರಭುತ್ವಕ್ಕೆ ಉದಾಹರಣೆಯೂ ಹೌದು. ಚುನಾವಣೆ ಮುಂತಾದ ತಾಂತ್ರಿಕ ಅಂಶಗಳನ್ನು ಪೂರೈಸುವುದರಿಂದ ಪ್ರಜಾಪ್ರಭುತ್ವವಾಗಿಯೂ, ಸಾಮಾಜಿಕ-ಆರ್ಥಿಕ ನೆಲೆ ಮತ್ತು ಅಧಿಕಾರ ಕೇಂದ್ರಿತ ರಾಜಕೀಯದಿಂದ ಪಾಳ್ಳೇಗಾರಿ ಸ್ವರೂಪ ದ್ದಾಗಿಯೂ, ಇರುವ ಈ ಗಣರಾಜ್ಯದಲ್ಲಿ, ಮೂಲಭೂತ ಸಮಸ್ಯೆಗಳು ಗೌಣವಾಗಿ, ಮೇಲ್ಮೈ ತೊಡಕುಗಳೇ ಸವಾಲುಗಳೆಂಬಂತೆ ಪ್ರತಿಪಾದಿತವಾಗುತ್ತವೆ. ಈ ನನ್ನ ಮಾತಿಗೆ ಉದಾಹರಣೆ ಯಾಗಿ ಕೆಲವು ವಿರೋಧ ಪಕ್ಷಗಳು **'ವಂಶಾಡಳಿತ ವಿರೋಧ'** ವನ್ನು ದೊಡ್ಡ ಸವಾಲೆಂಬಂತೆ ಪ್ರತಿಪಾದಿಸಿದ್ದನ್ನು ಗಮನಿಸಬಹುದು. ಜವಹರಲಾಲ್ ನೆಹರೂ ಅವರ ಹಿನ್ನೆಲೆ ಇದ್ದುದರಿಂದ ಇಂದಿರಾಗಾಂಧಿ ಯವರಿಗೆ, ಇಂದಿರಾಗಾಂಧಿಯವರಿಂದ ರಾಜೀವ್ ಗಾಂಧಿಯವರಿಗೆ ವಿಶೇಷ ರಾಜಕೀಯ ಸೌಲಭ್ಯ, ಸವಲತ್ತು ಮತ್ತು ಅಧಿಕಾರಗಳು ಲಭ್ಯವಾದವು ನಿಜ.

ಆದರೆ ಇವರು ಇಂಥವರ ಮಕ್ಕಳು ಎಂಬ ಕಾರಣಕ್ಕಾಗಿಯೇ ರಾಜಕೀಯ ಅಧಿಕಾರ ಪಡೆಯ ಬಾರದೆಂದು ಹೇಳುವಂತಿಲ್ಲ. ಸೂಕ್ತ ವಿಧಾನದಲ್ಲಿ ರಾಜಕೀಯ ಅಧಿಕಾರ ಪಡೆಯಬೇಕೆಂದು ನಾವು ಪ್ರತಿಪಾದಿಸಬಹುದಷ್ಟೆ. ಇಂಥವರಿಗೆ ವಂಶದ ಹಿನ್ನೆಲೆಯಿರುವುದರಿಂದಲೇ ವಿಶೇಷಾಧಿಕಾರ ಲಭ್ಯವಾಗುತ್ತಿದೆ ಯೆಂದು ಹೇಳುವಾಗಲೂ ನಾವು ತಾಂತ್ರಿಕ ಪ್ರಶ್ನೆಗಳಿಂದ ಇಕ್ಕಟ್ಟಿಗೆ ಸಿಕ್ಕಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಂಶಾಡಳಿತ ವಿರೋಧ ಎನ್ನುವುದು ಒಂದು ನೈತಿಕ ಪ್ರಶ್ನೆಯಾಗುತ್ತದೆ. ಕಾಂಗ್ರೆಸ್ ಪಕ್ಷದ ಆಂತರಿಕ ವಿಚಾರವಾಗಿ ನಾಯಕತ್ವದ ವಿಷಯವನ್ನು ನಾವು ನೋಡುವುದೇ ಹೆಚ್ಚು ಸೂಕ್ತವಾದುದು. ಆ ಪಕ್ಷದ ಆಂತರಿಕ ಬಿಕ್ಕಟ್ಟು ಮತ್ತು ಕೆಲವು ಆಸಕ್ತರ ಆಕಾಂಕ್ಷೆಗಳ ಫಲವಾಗಿ ಒಂದೇ ವಂಶಕ್ಕೆ ಸೇರಿದ ನಾಯಕರು ಅನಿವಾರ್ಯವಾಗಿದ್ದರೆ ಅದನ್ನೇ ಇತರೆ ಪಕ್ಷಗಳು ದೊಡ್ಡ ಸವಾಲೆಂದು ಭಾವಿಸಬೇಕಾಗಿಲ್ಲ. ವಂಶಾಡಳಿತ ವಿರೋಧ ಮಾಡುವುದೇ ಮುಖ್ಯವಾಗುವುದು, ಮೂಲಭೂತ ಭಿನ್ನ ನೆಲೆಗಳು ಇಲ್ಲದ ಸಂದರ್ಭದಲ್ಲಿ ಮಾತ್ರ ಎನ್ನುವುದು ನನಗಿಲ್ಲಿ ಮುಖ್ಯ.





ಕಾಂಗ್ರೆಸ್, ಜನತಾದಳ(ಪಕ್ಷ)-ಇಂಥ ಮಧ್ಯ ಪಂಥೀಯ ಪಕ್ಷಗಳ ರಾಜಕೀಯ ನೆಲೆ-ನಿಲುವುಗಳು ಮೂಲಭೂತವಾಗಿ ಬೇರೆಬೇರೆಯಾಗಿಲ್ಲ. ಮೇಲ್ಮೈಲಕ್ಷಣದಲ್ಲಿ ಭಿನ್ನತೆ ಕಾಣಿಸಬಹುದಾದರೂ ಉಳಿದಂತೆ ಒಡೆದು ಕಾಣುವ ವ್ಯತ್ಯಾಸವೇನೂ ಇಲ್ಲ. ಕಂಡುಬರುವ ಒಂದೇ ವ್ಯತ್ಯಾಸವೆಂದರೆ ಕಾಂಗ್ರೆಸ್‌ನಲ್ಲಿ ಒಂದೇ ವಂಶದವರಿಗೆ ನಾಯಕತ್ವ ಸಿಗುತ್ತಾ ಬಂದದ್ದು ಸರಿ, ಅದೇ ಇತರರಿಗೆ ದೊಡ್ಡ ಸವಾಲು ಎಂಬಂತಾಯಿತು. ವಾಸ್ತವವಾಗಿ ನಿಜವಾದ ಸವಾಲೆಂದರೆ ಈ ಗಣರಾಜ್ಯದ ಸಾಮಾಜಿಕ, ಆರ್ಥಿಕ ಬದಲಾವಣೆ ಮತ್ತು ಈ ಮೂಲಕ ಸಮಾನತೆಯ ಸಮಾಜದ ನಿರ್ಮಾಣ. ಆದರೆ ಇತರೆ ಮಧ್ಯಪಂಥೀಯ ಪಕ್ಷಗಳಿಗೆ ಈ ಹಿನ್ನೆಲೆಯು ಚಿಂತನೆಯಾಗಲೀ, ಕಾರ್ಯಕ್ರಮವಾಗಲಿ ದೃಢವಾಗಿ ಇಲ್ಲವಾದ ಕಾರಣ ಅಧಿಕಾರ ಗಳಿಸಲು ಅಡ್ಡವಾಗಿ ಕಂಡ ಇಂದಿರಾ ಗಾಂಧಿ, ರಾಜೀವ್‌ಗಾಂಧಿಯವರು ಒಂದು ವಂಶದ ವ್ಯಕ್ತಿಗಳಾಗಿ ಸವಾಲೆಂಬಂತಾದರು. ಇಂದಿರಾ ಗಾಂಧಿಯವರು ಇದ್ದುದರಲ್ಲಿ ಪ್ರಗತಿಪರ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುತ್ತ ಅಧಿಕಾರ ದಲ್ಲುಳಿಯಲು ಪ್ರಯತ್ನಿಸಿದ್ದರಿಂದ ಆ ಕಾರ್ಯಕ್ರಮಗಳನ್ನು ವಿರೋಧಿಸುವುದು ಮತ್ತು ಪರ್ಯಾಯ ಕಾರ್ಯಕ್ರಮ ಕೊಡುವುದು ಕಷ್ಟವಾಗಿ ಈ ಪಕ್ಷಗಳು ವಂಶಾಡಳಿತ ವಿರೋಧಕ್ಕೆ ಗಂಟುಬಿದ್ದವು. ಪಾಳ್ಳೇಗಾರಿ ಪ್ರಭುತ್ವಕ್ಕೆ ಸೇವೆ ಸಲ್ಲಿಸಿದ ಪರಂಪರೆಯುಳ್ಳ ನಮ್ಮ ದೇಶದ ಜನತೆಗೆ ವಂಶಾಡಳಿತ ಎನ್ನುವುದು ಒಂದು ತೊಡಕಾಗಿ ಕಾಣಿಸಲಿಲ್ಲ. ಸಾಮಾನ್ಯ ಜನತೆಗೆ ಬದುಕಿನ ಬವಣೆಯೇ ಪ್ರಮುಖ ಸವಾಲಾಗಿದೆಯಾದ್ದರಿಂದ ತಮಗಾದ ಅಲ್ಪಸ್ವಲ್ಪ ಅನುಕೂಲಕ್ಕಾಗಿ ಅವರು ವ್ಯಕ್ತಿ ಆರಾಧನೆಯಲ್ಲಿ ತೊಡಗಿದರು. ಇಂಥ ಪ್ರವೃತ್ತಿಯನ್ನು ವಿರೋಧಿಸಿದ ಕೆಲ ಬುದ್ಧಿವಂತರು ಮತ್ತು ಮಾಧ್ಯಮಗಳು ಸಹ ವಿರೋಧ ಪಕ್ಷಗಳ ನೆಲೆಯಲ್ಲಿ ವ್ಯಕ್ತಿ ಆರಾಧನೆಗೆ ತೊಡಗಿದ್ದು ಒಂದು ವಿರೋಧಾಭಾಸವೇ ಸರಿ! ಒಟ್ಟಿನಲ್ಲಿ ಬಹುಪಾಲು ಅಕ್ಷರಸ್ಥರು ಮತ್ತು ಅನಕ್ಷರಸ್ಥರಲ್ಲಿ ಈ ವಿಷಯಕ್ಕೆ ಸಂಬಂಧಪಟ್ಟಂತೆ ಅಗಾಧ ಅಂತರವೇನೂ ಕಾಣುತ್ತಿಲ್ಲ. ಅನಕ್ಷರಸ್ಥರು ಪ್ರಜಾಪ್ರಭುತ್ವವನ್ನು ಕುರಿತು ಮಾತೇ ಆಡುವುದಿಲ್ಲ. ಅಕ್ಷರಸ್ಥರು ಪ್ರಜಾಪ್ರಭುತ್ವದ ಮಾತನಾಡುತ್ತಲೇ ಅದಕ್ಕೆ ವಿರುದ್ಧ ನೆಲೆಯಲ್ಲಿ ಕೆಲಸ ಮಾಡುವುದು ನಿಂತಿಲ್ಲ. ಅಂದರೆ ನಮ್ಮಲ್ಲಿ ಬಲವಾದ ಸಾಮಾಜಿಕ ಆರ್ಥಿಕ ಬದಲಾವಣೆ ಯಾಗದೆ, ಈ ಮೂಲಕ ಸಮಾನತೆಯತ್ತ ಸಾಗುವ ಹೆಜ್ಜೆ ಗಟ್ಟಿಯಾಗದೆ, ಈ ದ್ವಂದ್ವಗಳು ನೀಗುವುದಿಲ್ಲ; ಪ್ರಜಾಪ್ರಭುತ್ವದ ಮೂಲ ಆಶಯ ಅನುಷ್ಠಾನಗೊಳ್ಳುವುದಿಲ್ಲ. ಇಲ್ಲಿಯವರೆಗೆ ಈ ದಿಕ್ಕಿನಲ್ಲಿ ನಡೆದ ಕೆಲಸ ಹೇಳಿಕೊಳ್ಳುವಂತಿಲ್ಲ.

ನಮ್ಮ ಗಣರಾಜ್ಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಮೇಲಿನ ಮಾತುಗಳಿಗೆ ಪುಷ್ಟಿ ಕೊಡುತ್ತವೆ. ನಮ್ಮಲ್ಲಿ ಪ್ರಗತಿಯೇ ಆಗಿಲ್ಲವೆಂದರೆ ಅದು ಹಸಿ ಸುಳ್ಳಾಗುತ್ತದೆ. ಆದರೆ ಈ ಪ್ರಗತಿಯು ಅಧಿಕಾರದ ಒಂದು ಯಾಂತ್ರಿಕ ಪ್ರಕ್ರಿಯೆಯಾಗಿ ನಡೆಯಿತೇ ಹೊರತು ನಿರ್ದಿಷ್ಟ, ದೃಢ ರಾಜಕೀಯ ಕಾರ್ಯಕ್ರಮವಾಗಿ ನಡೆಯಲಿಲ್ಲ. ಉಳಿದಂತೆ ಏನೇ ಭಿನ್ನಾಭಿಪ್ರಾಯವಿರಲಿ ಪ್ರಗತಿಯ ತೀವ್ರತೆ ಎರಡು ಸಂದರ್ಭದಲ್ಲಿ ಉಂಟಾಗಿದೆ ಎನ್ನಿಸುತ್ತದೆ. ಒಂದು ನೆಹರು ಅವರ ಔದ್ಯಮೀಕರಣದ ಕ್ರಿಯೆ; ಎರಡು-ಇಂದಿರಾಗಾಂಧಿ ಯವರು 'ಗರೀಬಿ ಹಟಾವೋ' ಘೋಷಣೆಯ ಹಿಂದೆಯೇ ಹಾಕಿಕೊಂಡ ಪ್ರಗತಿಪರ ಕಾರ್ಯಕ್ರಮಗಳು. ಈ ಎರಡೂ ಸಂದರ್ಭಗಳು ಕೆಟ್ಟದ್ದನ್ನೂ ಕೊಡುವುದರ ಜೊತೆಗೆ ನಮ್ಮ ಕನಸುಗಳು ಬತ್ತದಂತೆಯೂ ನೋಡಿಕೊಂಡಿವೆ. ಒಂದು ಕಡೆ ಔದ್ಯಮೀಕರಣದ ಅತಿರೇಕ ಕಂಡುಬಂತು. ಇನ್ನೊಂದು ಕಡೆ ಪ್ರಗತಿಪರ ಕಾರ್ಯಕ್ರಮಗಳು ಅಧಿಕಾರದಲ್ಲುಳಿಯುವ ತಂತ್ರಗಳಾದವು. ಇಷ್ಟಾದರೂ ಈ ಎರಡೂ ಕಾಲಘಟ್ಟದಲ್ಲಿ ನಮ್ಮ ದೇಶದ ಅನೇಕರ ಆಸೆ, ಆಕಾಂಕ್ಷೆಗಳಿಗೆ, ಬದುಕ ಬಹುದೆಂಬ ಭರವಸೆಗೆ, ಕನಸಿನ ಸ್ಪರ್ಶ ಸಿಕ್ಕಿತು. ಆದ್ದರಿಂದಲೇ ತುರ್ತುಪರಿಸ್ಥಿತಿ ಹೇರಿದರೂ ಬುದ್ಧಿಜೀವಿಗಳು ಅದನ್ನು ವಿರೋಧಿಸಿದರೂ ಇಂದಿರಾಗಾಂಧಿ ಜನಸಾಮಾನ್ಯರ ಪ್ರೀತಿ ವಿಶ್ವಾಸವನ್ನು ಸಂಪೂರ್ಣ ಕಳೆದು ಕೊಳ್ಳಲಿಲ್ಲ. ಇಷ್ಟಾಗಿಯೂ ನಮ್ಮ ದೇಶದ ಸ್ಥಿತಿ ಆಶಾದಾಯಕವಾಗಿಲ್ಲ; ಸಾಮಾಜಿಕ-ಆರ್ಥಿಕ ಅಸಮಾನತೆಯ ಅಂತರ ಕಡಿಮೆಯಾಗಿಲ್ಲ. ಬದಲಾಗಿ ಬಂಡವಾಳಗಾರರ ಸಂಪತ್ತು ಬೆಳೆಯುತ್ತಲೇ ಇದೆ. ರಾಜಕೀಯ ಆಧುನಿಕತೆಯಿಂದ ಹಳ್ಳಿಗಳ ಪಾಳ್ಳೇಗಾರಿ ಭೂಮಾಲೀಕ ವರ್ಗವು ಅಧಿಕಾರ ಗಳಿಸುವುದಕ್ಕಾಗಿ ಪ್ರಜಾಪ್ರಭುತ್ವದಲ್ಲಿ ಪಾಲ್ಗೊಂಡು ಯಶಸ್ವಿಯಾಗುತ್ತಿರುವಂತೆ, ಆಧುನಿಕ ಬಂಡವಾಳಗಾರರು ಔದ್ಯಮೀಕರಣದ ಲಾಭ ಪಡೆಯುತ್ತಿದ್ದಾರೆ.

ಸಾಂಕೇತಿಕವಾಗಿ ಉದಾಹರಿಸುವುದಾದರೆ–ಬಿರ್ಲಾ ಅವರ ಬಂಡವಾಳ ೧೯೫೦ರಲ್ಲಿ ೧೫೦ ಕೋಟಿ ಗಳಿದ್ದದ್ದು ೧೯೬೭ ರಲ್ಲಿ ೪೫೮ ಕೋಟಿಯಾಗಿ, ೧೯೭೬ ರಲ್ಲಿ ೧೦೫೭ ಕೋಟಿಯಾಗಿ ೧೯೮೪ರ ವೇಳೆಗೆ ೨೪೦೦ ಕೋಟಿ ರೂಪಾಯಿಗಳಾಗಿತ್ತು. ನಮ್ಮ ಕೇಂದ್ರ ಸರಕಾರದ ಬಜೆಟ್‌ನ ಖೋತಾ ಲೆಕ್ಕವು ಮೇಲ್ಕಂಡ ಇಸವಿಗಳ ಕ್ರಮದಲ್ಲಿ ೫೬೩ ಕೋಟಿ, ೯೪೮ ಕೋಟಿ, ೧೧೩೩ ಕೋಟಿ ಮತ್ತು ೨೦೬೦ ಕೋಟಿಯಷ್ಟಾಗಿತ್ತು. ಈಗ ಇನ್ನೂ ಹೆಚ್ಚಾಗಿದೆ. ಬಂಡವಾಳಗಾರರ ಬಂಡವಾಳವೂ ಹೆಚ್ಚಾಗಿದೆ. ಇವರ ಬಂಡವಾಳ ಹೆಚ್ಚಾಗುತ್ತಿದ್ದರೆ ಸರ್ಕಾರದ ಸಂಪನ್ಮೂಲ ಖೋತಾ ಆಗುತ್ತಿದೆ! ಜೊತೆಗೆ ಒಂದು ಅಂದಾಜಿನ ಪ್ರಕಾರ ನಮ್ಮ ಗಣರಾಜ್ಯದಲ್ಲಿ ಈಗ ೪೦,೦೦೦ ಕೋಟಿ ರೂಪಾಯಿಗಳಷ್ಟು ಕಪ್ಪು ಹಣವಿದೆ. ಇಷ್ಟಾಗಿಯೂ ನಮ್ಮದು ಬಡದೇಶ; ಬಡತನಕ್ಕೆ ಬರವಿಲ್ಲದ ದೇಶ!

ಇಲ್ಲಿ ಬರ್ನಾಡ್ ಶಾ ಅವರು ಹೇಳಿದ ಮಾತು ಮುಖ್ಯವೆನಿಸುತ್ತದೆ– **"ಪ್ರಜಾಪ್ರಭುತ್ವವು ಬಿಸಿಗಾಳಿ ತುಂಬಿದ ಒಂದು ಬಲೂನು. ಜನರು, ತಮ್ಮ ಜೇಬುಗಳ್ಳತನವಾಗುತ್ತಿರುವುದನ್ನೂ ಲೆಕ್ಕಿಸದೆ, ಮೇಲೆ ಹಾರಾಡುವ ಈ ಬಲೂನನ್ನು ನೋಡುತ್ತಿರುತ್ತಾರೆ."** – ಈ ಮಾತುಗಳು ಪ್ರಜಾಪ್ರಭುತ್ವ ಉಂಟುಮಾಡಬಹುದಾದ ಮೈಮರೆವು ಮತ್ತು ಭ್ರಷ್ಟತೆಯ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆ. ನಾವು ಪ್ರಜಾಪ್ರಭುತ್ವದಿಂದ ಪುಳಕಿತರಾಗುತ್ತಲೇ ಸದಾ ಜಾಗ್ರತರಾಗಿರಬೇಕಾದ ಅಗತ್ಯವನ್ನು ಬರ್ನಾಡ್ ಶಾ ತಮ್ಮದೇ ರೀತಿಯಲ್ಲಿ ಹೇಳಿದ್ದಾರೆ. ಜನರ ಅಜಾಗರೂಕತೆಯು ರಾಜಕೀಯ ದುರಪಯೋಗ ಮತ್ತು ಭ್ರಷ್ಟತೆಯ ದಾರಿಯನ್ನು ಸುಗಮಗೊಳಿಸುತ್ತದೆ. ಸಮೂಹ ಚಳವಳಿಗಳು ಹೆಚ್ಚಾಗಿಲ್ಲದಿದ್ದರೆ ದುರುಪಯೋಗದ ಪ್ರಮಾಣ ಮತ್ತಷ್ಟು ಏರುತ್ತದೆ. ನಮ್ಮ ದೇಶದಲ್ಲಿ ಜನಪರವಾದ ಸಮೂಹ ಚಳವಳಿಗಳು ಎಲ್ಲಾ ಕಡೆ ವ್ಯಾಪಿಸಿಲ್ಲವಾದ್ದರಿಂದ ರಾಜಕೀಯವೂ ಒಂದು 'ವ್ಯವಹಾರ' ಮಾತ್ರವಾಗದೆ; ವ್ಯಾವಹಾರಿಕ ನೆಲೆಗೆ ಒತ್ತು ಬಿದ್ದಿದೆ. ಭ್ರಷ್ಟಾಚಾರ, ಪ್ರತ್ಯೇಕವಾದ ಮತ್ತು ಕೋಮುವಾದಗಳು ನಮ್ಮ ಗಣರಾಜ್ಯದ ಇವತ್ತಿನ ಪ್ರಮುಖ ಸಮಸ್ಯೆಗಳಾಗಿ ಕಾಣಿಸುತ್ತಿದೆ.

ಭ್ರಷ್ಟಾಚಾರವೆಂದರೆ ಭಯ ಬೀಳಬೇಕಾದ ಮನಸ್ಥಿತಿ ಇಂದು ಮಾಯವಾಗುತ್ತಿದ್ದು ಅದೊಂದು ಸ್ವಾಭಾವಿಕ ಕ್ರಿಯೆಯಾಗುತ್ತಿದೆ. ನಮ್ಮ ಗಣರಾಜ್ಯದ ಅತ್ಯಂತ ಅನಾರೋಗ್ಯಕರ ಬೆಳವಣಿಗೆಯಿದು. ಸ್ವಾರ್ಥ, ಲಾಭಕೋರತನ, ಲಂಚಾದಿಗಳೇ ಜೀವನ ವಿಧಾನವಾಗುತ್ತಿರುವ ಸಮಾಜ, ಪ್ರಜಾಪ್ರಭುತ್ವದ ಮೂಲ ಆಶಯಕ್ಕೆ ಆತಂಕಕಾರಿಯಾಗುತ್ತದೆ. ಲಂಚ ತೆಗೆದುಕೊಂಡರೂ ಪರವಾಗಿಲ್ಲ, ಕೆಲಸವಾದರೆ ಸಾಕೆಂದು ಜನರು ಅಪೇಕ್ಷಿಸುವ ಹಂತ ತಲುಪಿರುವುದು ನಮ್ಮ ಸಾಮಾಜಿಕ ಬದುಕಿನ ದೊಡ್ಡ ಕಳಂಕ. ಈ ಕಳಂಕಕ್ಕೆ ಕಾರಣವಾದ ರಾಜಕೀಯ ಪುಡಾರೀಕರಣ ಮತ್ತು ಪದ್ಧತಿಗಳು ಬದಲಾಗುವಂತೆ ನಮ್ಮ ಕಣ್ತುಂಬಾ ಹೊಸ ಸಮಾಜದ ಕನಸು ತುಂಬಬೇಕಾಗಿದೆ. ಆದರೆ ಕನಸಿಗೆ ಕಿಚ್ಚಿಟ್ಟು ಕುರುಡಾಗಿಸುವ ಕ್ರೌರ್ಯ ನಮ್ಮ ವ್ಯವಸ್ಥೆಯ ಒಳಸೇರಿ ಕೊಂಡಿದೆ. ಭ್ರಷ್ಟಾಚಾರ ಎನ್ನುವುದು ಕೇವಲ ನೈತಿಕ ಪ್ರಶ್ನೆಯಲ್ಲ. ಅದೊಂದು ರಾಜಕೀಯ ಪ್ರಶ್ನೆ. ಭ್ರಷ್ಟಾಚಾರ ಬಲವಾಗುತ್ತ ಸರ್ವಾಧಿಕಾರ, ಚಿಗುರೊಡೆಗುತ್ತದೆ. ಯಾಕೆಂದರೆ, ಭ್ರಷ್ಟಾಚಾರಿಯಾದ ಅಧಿಕಾರಸ್ಥ ರಾಜಕಾರಣಿಗಳು ಅದು ಬಯಲಾಗುತ್ತ ಹೋದಂತೆ ಬಿಗಿಯಾಗ ತೊಡಗುತ್ತಾರೆ. ತಮ್ಮ ರಕ್ಷಣೆಗಾಗಿ ಅಧಿಕಾರದ ಸೂತ್ರಗಳನ್ನು ಬಳಸಿಕೊಳ್ಳುತ್ತಾರೆ. ಸಾಧ್ಯವಾದಷ್ಟು ರಾಜಕೀಯ ಶಕ್ತಿಯನ್ನು ತಮ್ಮಲ್ಲೇ ಕೇಂದ್ರೀಕರಿಸಿಕೊಳ್ಳಬಯಸುತ್ತಾರೆ. ಆಗ ಪ್ರಜಾ ಪ್ರಭುತ್ವದ ತಾಂತ್ರಿಕ ಅಂಶಗಳು ಅಸ್ತಿತ್ವದಲ್ಲಿದ್ದರೂ ಅಂತಃಸತ್ವವು ಸರ್ವಾಧಿಕಾರಿ ಧೋರಣೆಯನ್ನು ಒಳಗೊಳ್ಳುತ್ತದೆ. ಇದರಿಂದ ರಾಜಕೀಯ ಅಧಿಕಾರಸ್ಥರ ಭ್ರಷ್ಟಾಚಾರವು ಸರ್ವಾಧಿಕಾರೀ ಹೆಚ್ಚಿಗೆ ಒತ್ತಾಸೆಯಾಗುವ ಅಪಾಯವಿದೆ.

*–ಮುಂದುವರೆಯುತ್ತದೆ.*

> *ಧರ್ಮವೆಂದರೆ ಕೇವಲ ಲಾಂಛನ, ಕಾಂಚನ ಗಳಿಂದ ನಿರ್ಮಿತವಾದುದಲ್ಲ, ದಯಾಮೂಲದಿಂದ ಬಂದುದು. ಬಿದ್ದವರನ್ನು ಬೀಳುತ್ತಿರುವವರನ್ನು, ಬೀಳಲಿರುವವರನ್ನು ಉದ್ಧರಿಸುವುದೇ ಧರ್ಮ. ಅಂತರಂಗ, ಬಹಿರಂಗ ಶುದ್ಧವಾಗಿರುವುದೇ ಧರ್ಮ.*
>
> * * *
>
> *ಹಸಿದು ಬಂದವನಿಗೆ ಅನ್ನ ನೀಡುವುದು ಧರ್ಮ. ಕತ್ತಲಿನಲ್ಲಿ ತೊಳಲಾಡುತ್ತಿರುವವನಿಗೆ ಬೆಳಕು ನೀಡುವುದು ಧರ್ಮ, ತತ್ತ್ವ ಮತ್ತು ಸಂಪ್ರದಾಯಗಳ ಆಚರಣೆಯಲ್ಲಿ ಈ ಧರ್ಮ ಅಡಗಿದೆ.*
>
> *– ಶ್ರೀವಾಣಿ*





# ಜೀವನ ಕಲೆ ಮತ್ತು ಅಧ್ಯಾತ್ಮಿಕ ಕಲೆಗಳ ಸುಂದರ ಸಂಗಮ – 'ಆರೋಗ್ಯ'

– ಪ್ರೊ. ಜಿ.ಹೆಚ್. ಹನ್ನೆರಡುಮಠ*

*ಜೀವನದ ಸಂಭ್ರಮವೇ ಯೌವನ !*
*ಸಾವಿಗಾಗಿ ಸಾಲು ಹಚ್ಚಿ ನಿಲ್ಲುವುದೇ ವೃದ್ಧಾಪ್ಯ !*
*ಮುಪ್ಪು ಸಾವಿನ ಸೊಪ್ಪು !!*
*ಛೇಛೇ... ಇದು ತಪ್ಪೋತಪ್ಪು ....*

ಯೌವನದ ಸುಖವೇ ಬೇರೆ.... ಮುಪ್ಪಿನ ತೃಪ್ತಿ ಹಾಗೂ ಅನುಭವದ ರಸಾತ್ಮಕತೆಯೇ ಬೇರೆ. ಬಾಲ್ಯ–ಯೌವನ–ವೃದ್ಧಾಪ್ಯ–ಮರಣಗಳಿಗೆ ಜೀವನದ ಚದುರಂಗದಲ್ಲಿ ತಮ್ಮದೇ ಪರಿಪೂರ್ಣತೆಯ ಬೆಳಕು ಇದೆ.

ಒಂದು ಹೆಚ್ಚು....ಒಂದು ಕಮ್ಮಿ.... ಖಂಡಿತ ಅಲ್ಲ. ಮುಪ್ಪನ್ನು ಅರ್ಥಪೂರ್ಣವಾಗಿ ಆನಂದಿಸುವವನೇ ಶಿವಯೋಗಿ.

ಅನೇಕರು ಮರಣದ ಗೆಳೆಯನಾದ ಮುಪ್ಪನ್ನನಿಗಾಗಿ ಅಂಜಿ; ತಲೆಯ ಕೂದಲಿಗೆ ಕಪ್ಪುಬಣ್ಣ ಲೇಪಿಸಿಕೊಂಡು, ಬೆಳ್ಳಿಮೀಸೆಗೂ ನೀರಲ ರಂಗು ನೇವರಿಸಿಕೊಂಡು, ಕನ್ನಡಿ ಮೇಲೆ ಕಣ್ಣಾಡಿಸುವ ಸೊಗಸುಗಾರರೂ ಉಂಟು.

ಸೌಂದರ್ಯ ಪ್ರಜ್ಞೆಯ ಹಸಿವು ನಿತ್ಯ ನಿರಂತರ. ಆದರೆ ಮುಪ್ಪು ಮನುಕುಲಕ್ಕೆ ಮಹದೇವನ ವರದಾನ. ಹಸಿರೆಲೆಗೆ ಹಿರಿಯ ತಾಯಿ. ತೂಕಬದ್ಧವಾದ ಬದುಕನ್ನು ಬದುಕಬಲ್ಲವನಿಗೆ ಸಾವು ಸುಂದರ ಸಂಗಾತಿ! ಮರಣವೇ ಮಹಾನವಮಿ!

ಅನೇಕರು; ಅದೇಕೆ ಬಹಳಷ್ಟು ಜನ... ಹರೆಯ ಕಾಲದಲ್ಲಿ ತಿಂದುಂಡಂತೆಯೇ ವೃದ್ಧಾಪ್ಯದಲಿಯೂ ಖಾರ–ಯಣ್ಣಿ–ತುಪ್ಪ–ಬೆಣ್ಣೆ–ಕೆನೆ–ಬೆಲ್ಲ–ಭಜಿ–ಮಿರ್ಚಿ–ಕರಿದದ್ದು–ಹುರಿದದ್ದು ಚಕ್ಕಂದಾಗಿ ಚಪ್ಪರಿಸುತ್ತಾರೆ. ನಾಲಿಗೆಯ ಚಪಲವೇ ಮಿರ್ಚಿ ಎಂದು ನಂಬಿದ ಭೋಗ ಭೂಪರು ಅವರು.

ಹೊಟ್ಟೆ ನೋವಿದ್ದರೂ ಬುಟ್ಟಿಗಟ್ಟಲೇ ಮಿರ್ಚಿ ತಿಂದು ಮೇಲೆ ಹೆಂಡ ಕುಡಿದವರನ್ನು ನಾನು ಕಣ್ಣಾರೆ ಕಂಡಿದ್ದೇನೆ. ಕರುಳ ಹುಣ್ಣು ಆಗಿ ಕತ್ತರಿಸಿದ ಕರುಳಿಗೆ ಟೂಬು ಜೋಡಿಸಿಕೊಂಡ ಮೇಲೆಯೂ ಕಂಠಪೂರ್ತಿ ಮದುವೆ ಊಟ ಉಂಡು ನೇರವಾಗಿ ಮಸಣಕ್ಕೆ ಹೋದವರನ್ನೂ ಪ್ರತ್ಯಕ್ಷ ನೋಡಿದ್ದೇವೆ.

ದಿನಬೆಳಗಾದರೆ ವೈದ್ಯರಾಯನ ಮನೆಗೆ ಹೋಗಿ ಔಷಧೋಪಚಾರಗಳ ಸಕಾಲಿಕ ಸಲಹೆ ಸಂಪಾದಿಸುತ್ತಾರೆ. ವೈದ್ಯ ವಿಜ್ಞಾನ, ಸುಶ್ರೂಷೆ ಹಾಗೂ ಔಷಧೀಯ ಪದ್ಧತಿಗಳು ಬೇಕೆಬೇಕು; ಆದರೆ ಅದರ ಜೊತೆಜೊತೆಗೆ ಆರೋಗ್ಯವಂತರಾಗಿ ಬಾಳುವ ಶಿಸ್ತು ಬದ್ಧತೆಯ ಜೀವನ ಶೈಲಿಯೂ ಬೇಕು.

ಜಡ್ಡು ಸೊಡ್ಡು ಹೊಡೆದು ಬಂದಮೇಲೆ ವೈದ್ಯಪ್ರಜ್ಞೆ ಗೊಡ್ಡು ! ಜಡ್ಡಿಗಿಂತ ಮೊದಲ ಮುನ್ನರಿವಿನ ಎಚ್ಚರಿಕೆಯೇ ಗುಡ್ಡು !! ಒಂದರ್ಥದಲ್ಲಿ..... ಅಥವಾ ನಿಜವಾದ ಅರ್ಥದಲ್ಲಿ ... ನಮಗೆ ನಾವೇ ಡಾಕ್ಟರು ! ನಾಲಿಗೆಯ ದಿಢೀರ್ ರುಚಿಗೆ ಬೆನ್ನುಹತ್ತಿ ನಾವು ನಮ್ಮ ಹೊಟ್ಟೆಯನ್ನೇ ಶನಿವಾರ ಸಂತಿ ಮಾಡಿದರೆ ನಮ್ಮ ಶರೀರದೊಳಗಿನ ಶಾಂತ ಸರೋವರ ಜೋಕುಮಾರ ಸ್ವಾಮಿಯ ಕಡೇ ಹಾಡು ಹಾಡುವಲ್ಲಿ ಸಂದೇಹವೇ ಇಲ್ಲ !

"ಶರಣರ ಗುಣ ಮರಣದಲ್ಲಿ ನೋಡು" ಎಂಬಗಾದೆ ಇದೆ. ಆರೋಗ್ಯ ಸೂತ್ರಗಳನ್ನು ಅರ್ಥ ಮಾಡಿಕೊಂಡವನೇ ನಿಜವಾದ ಶರಣ. ಕಚ್ಚಾ ಆಹಾರ–ತರಕಾರಿ–ಸೊಪ್ಪುಗಳ ಬೇಯಿಸಿದ ಇಲ್ಲವೆ ಬೇಯಿಸದ ರಸ, ಉಪ್ಪು–ಖಾರ–ಹುಳಿ–ಮಸಾಲೆ–ಎಣ್ಣೆಗಳು ಇಲ್ಲದ ರಾಗಿ–ಜೋಳ–ಗೋಧಿಯ ಗಂಜಿ, ಪಚಡಿ, ಮೊಳಕೆ ಕಾಳು, ಪ್ರಕೃತಿ ಪರಿಸರದಲ್ಲಿ ತಿರುಗಾಟ, ತಣ್ಣೀರು ಸ್ನಾನ, ನಿಯಮಿತ ಪ್ರಾಣಾಯಾಮ, ಶುದ್ಧಹವೆಯಲ್ಲಿ ಶಾರೀರಿಕ

* ಯೋಗಭವನ : ಇಂದ್ರಪ್ರಸ್ಥ : ಬನ್ನೇರುಘಟ್ಟದ ದಾರಿ: ಗೊಟ್ಟಿಗೆರೆ ಅಂಚೆ : ಬೆಂಗಳೂರ–560083. ಮೊ.9945701108

ಕಸರತ್ತು, ಯೋಗ-ಧ್ಯಾನ-ಅಧ್ಯಯನ-ಮೌನಗಳ ಜೀವನಶೈಲಿ.... ಇವುಗಳಿಂದ ಮುಪ್ಪನ್ನು ಒಪ್ಪುಗೊಳಿಸಿದವರನ್ನು ಕಂಡಿದ್ದೇವೆ.

ಆದರೇನು ಲಾಲ್‌ಬಾಗ ಗಾರ್ಡನಿನಲ್ಲಿ ಬೆಳಿಗ್ಗೆ ಬೆವರು ಸುರಿಯುವ ಹಾಗೆ ಜಾಗಿಂಗ್ ಮಾಡಿ ನೇರವಾಗಿ ಮಸಾಲೆ ದೋಸೆ ತಿಂದ ಬೆಂಗಳೂರಿನ ಗೆಳೆಯರು ನನಗೂ ದೋಸೆ ತಿನ್ನಿಸಿದ್ದಾರೆ ! ಎಂಥಾ ರುಚಿ ಅಂತೀರಿ?

ಜೊತೆಜೊತೆಗೆ ಕೆಲವರು ಯದ್ವಾತದ್ವಾ ಮದ್ಯಸೇವನೆ –ಧೂಮಪಾನ-ತಂಬಾಕು-ಗಂಟೆಗೊಮ್ಮೆ ಚಹಾ-ಅತಿಯಾದ ಭೋಗ-ರಾತ್ರಿಯ ಖಯ್ಯಾಲಿಗಳು-ಆಲಸ್ಯ-ಅತಿನಿದ್ರೆಗಳಿಂದ ಭಯಾನಕ ರೋಗಗಳಿಗೆ ತುತ್ತಾಗಿ, ಮುಪ್ಪಿನಲ್ಲಿ ಲಕ್ಷಗಟ್ಟಲೆ ಹಣದ ಹೊಳೆ ಹರಿಸುತ್ತ... "ಅಯ್ಯೋ ನಾನೇನು ತಪ್ಪು ಮಾಡಿದೆ ದೇವರೇ" .... ಎಂದು ವಿಲಿವಿಲಿ ಒದ್ದಾಡುತ್ತ ಬೆಳೆಯುವ ಮಕ್ಕಳನ್ನು ಹೊಳೆಯ ಮಧ್ಯದಲ್ಲೇ ಕೈಬಿಟ್ಟು ಹೋದವರನ್ನೂ ಕಂಡಿದ್ದೇವೆ

ನಿಜಹೇಳಬೇಕೆಂದರೆ ನಿಜವಾದ ಆರೋಗ್ಯಕ್ಕೆ ರೊಕ್ಕದ ಖರ್ಚೇ ಇಲ್ಲ. ಉದಾಹರಣೆಗೆ ಋಷಿಮುನಿಗಳಿಂದ ಜಾರಿಯಲ್ಲಿ ಬಂದ ಪುಕ್ಕಟೆಯಾಗಿ ಸಿಗುವ ಅಮೃತ ಬಳ್ಳಿಯ ಸೇವನೆ, ಬೇವಿನಕಡ್ಡಿ ಜಾಲಿ ಕಡ್ಡಿಗಳಿಂದ ಹಲ್ಲುಜ್ಜುವಿಕೆ, ಮನೆಮದ್ದು-ಹಿತ್ತಲಮದ್ದು-ಅಡವಿಮದ್ದು-ಶೀಗೆಕಾಯಿ ಬಳಕೆ, ಸುಲಭವಾಗಿ ಸಿಗುವ ಸವುತೆಕಾಯಿ-ಗಜ್ಜರಿ-ಮೂಲಂಗಿ-ಮೊಳಕೆಕಾಳು-ಹಸಿರು ತರಕಾರಿಗಳ ಬಳಕೆ ಇವು ಮುಪ್ಪಿನಲ್ಲೂ ಯೌವನದ ಸ್ವಿಂಗ ಕೊಡುವ ಸ್ವಾರಸ್ಯಗಳು !

ಸಂಯಮವೇ ಆರೋಗ್ಯ.... ವಿಸ್ಸಂಖಲತೆಯೇ ರೋಗ. ಒಂದು ಖರೆ ಸುದ್ದಿ ಕೇಳ್ರಿ.... ನಮ್ಮ ತೊಂಬತ್ತಾರು ವರ್ಷಗಳ ಅಮ್ಮ.... "ನಾನು ಇನ್ನು ಮೂವತ್ತು ದಿನಕ್ಕೆ ಶರೀರ ಬಿಡುತ್ತೇನೆ" ಎಂದು ಸಾವಿನ ಸೂಚನೆ ಮೊದಲೇ ನೀಡಿದಳು. ನಾವೆಲ್ಲ ನಕ್ಕೆವು! ಆನಂತರ ಎರಡು ವಾರಗಳ ನಂತರ...." ನಾನು ಇನ್ನು ಹದಿನೈದು ದಿನಕ್ಕೆ ಪ್ರಾಣ ಬಿಡುತ್ತೇನೆ...ನಾನು ಸತ್ತಾಗ ಯಾರೂ ಅಳಬೇಡಿ... ಆತ್ಮ ಬಂಧಿತ ಆಗುತ್ತದೆ..." ಎಂದು ಎಲ್ಲರಿಗೂ ಸಾವಿನ ಸಮಾರಂಭದ ಸುಂದರ ಸುದ್ದಿ ಹೇಳಿದಳು... ಆ ನಂತರ ಹದಿನಾಲ್ಕು ದಿನಕ್ಕೆ..." ನಾನು ನಾಳೆ ಬೆಳಿಗ್ಗೆ ಪ್ರಾಣ ಬಿಡುತ್ತೇನೆ... ಎಲ್ಲರೂ ಬೇಗನೇ ಊಟ ಮಾಡಿರಿ... ನನ್ನ ದಹನಕ್ರಿಯೆ ಮಧ್ಯಾಹ್ನ ಬೇಗನೇ ಮಾಡಿರಿ... ಅಂದರೆ ದೂರದ ಊರಿಂದ ಬಂದವರಿಗೆ ವಾಪಸ್ಸು ಹೋಗಲು ಬಸ್ಸು ಸಿಗುತ್ತವೆ"... ಎಂದು ಹೇಳಿದಾಗ ನಮಗೆಲ್ಲಾ ಅಚ್ಚರಿ !.... ಕಟ್ಟಕಡೆಗೆ ಶರೀರ ಬಿಡುವಾಗ ಐದು ನಿಮಿಷ ಇದ್ದಾಗಲೂ ತಾನು ಶರೀರ ಬಿಡುವ ಬಗ್ಗೆ ಹೇಳಿ; ಒಂದಿಷ್ಟು ನೀರು ತಾನೇ ಕೇಳಿ... ಬಾಯಲ್ಲಿ ಹಾಕಿಸಿಕೊಂಡು... ಹಕ್ಕಿಯಂತೆ ಹಾರಿ ಹೋದಳು! ಜೀವನದ ತೂಕ ತಕ್ಕಡಿ ಗೊತ್ತಿದ್ದವರಿಗೆ ಸಾವಿನ ಚಂದಚಕ್ಕಡಿ ಅರ್ಥವಾಗುತ್ತದೆ! ಸಾವಿನ ಮೆಥೆಮೆಟಿಕ್ಸ ಬಲ್ಲವನೇ ಶಿವಯೋಗಿ!

ಜೀವನಕಲೆ-ಆಧ್ಯಾತ್ಮಕಲೆಗಳ ಸುಂದರ ಸಂಗಮವೇ ಆರೋಗ್ಯ ! ಆರೋಗ್ಯ ಸೂತ್ರ ಅಭ್ಯಾಸದಿಂದ ವಿದ್ವತ್ತಿನಿಂದ ಖಂಡಿತಾ ಬರುವುದಿಲ್ಲ... ಸಹಜ ತಪಸ್ಸು-ಸಂಯಮದಿಂದ ನಮಗೆ ನಾವೇ ಜ್ಯೋತಿರ್ಲಿಂಗ !

ಅರುಹೇ ಆರೋಗ್ಯ ! ಮರಹೇ ರೋಗ !!

❑

*ಬದುಕಿನಲ್ಲಿ ಬೆಳಕನ್ನು ಕಾಣಬೇಕಾದರೆ, ನೆಮ್ಮದಿಯ ಜೀವನ ಸಾಗಬೇಕಾದರೆ, ಶಾಂತಿ ಸಮೃದ್ಧಿಯ ಜೀವನದ ಅರಿವಿನ ಎಚ್ಚರದಿಂದ ಸಾಧ್ಯ. ಸಂತೋಷಕ್ಕೆ ಸಮನಾದ ಸುಖವಿಲ್ಲ, ಶಾಂತಿಗೆ ಸಮಾನವಾದ ತಪಸ್ಸಿಲ್ಲ, ವಿದ್ಯೆಗಿಂತ ಸಮನಾದ ಸಂಪತ್ತಿಲ್ಲ.*

* * *

*ಜ್ಞಾನ ಶ್ರೇಷ್ಠ ರತ್ನ. ನಿಜವಾದ ಆಭರಣ, ಮೌಲ್ಯವುಳ್ಳ ವಸ್ತು. ಮನುಷ್ಯನನ್ನು ಪ್ರಾಣಿಗಳಿಂದ ಪ್ರತ್ಯೇಕಿಸುವ ಶ್ರೇಷ್ಠಜ್ಞಾನ. ಪರಮಾತ್ಮ ಮನುಷ್ಯನಿಗೆ ಜ್ಞಾನ ಕರುಣಿಸಿ ಪ್ರಾಣಿಗಳೆಲ್ಲಾ ಮನುಷ್ಯನಿಗೆ ಮೊದಲ ಸ್ಥಾನವನ್ನು ದೊರಕಿಸಿದ. ಪರಮಾತ್ಮ ನೀಡಿದ ವಿಶೇಷ ವರ ಜ್ಞಾನ. ಜ್ಞಾನಾಭಿವೃದ್ಧಿ ಮಾಡಿಕೊಂಡು ಜೀವನದಲ್ಲಿ ಬೆಳಕು ಕಾಣುವುದು ಮಾನವನ ಗುರಿ.*

*– ಶ್ರೀವಾಣಿ*





# ಶರಣ ಸಾಹಿತ್ಯ

**1. 'ಶರಣ' ಸಾಹಿತ್ಯ ಎಂದರೆ ಯಾವುದು ?**
ಶರಣರು ರಚಿಸಿದ್ದು ಮತ್ತು ಶರಣರನ್ನು ಕುರಿತದ್ದು.

**2. ಶರಣರು ರಚಿಸಿದ ಸಾಹಿತ್ಯ ಯಾವುದು ?**
ಪ್ರಮುಖವಾಗಿ ವಚನ ಸಾಹಿತ್ಯ; ಜೊತೆಗೆ ಕೆಲವು ಶರಣರು ತ್ರಿವಿಧಿಗಳು, ಹಾಡುಗಬ್ಬಗಳು, ಚೌಪದಿಗಳು ಮತ್ತು ಸಿದ್ಧಾಂತ ಕೃತಿಗಳನ್ನು ರಚಿಸಿದ್ದಾರೆ.

**3. ಶರಣರನ್ನು ಕುರಿತ ಸಾಹಿತ್ಯವೆಂದರೆ ಯಾವುದು ?**
ಹರಿಹರನು ರಚಿಸಿದ ರಗಳೆಗಳು, ರಾಘವಾಂಕನ ಕಾವ್ಯಗಳು ಶೂನ್ಯ ಸಂಪಾದನೆ, ಶಿವಶರಣರ ಚರಿತೆಗಳು ಇತ್ಯಾದಿ.

**4. ಹೆಸರಿಸಬಹುದಾದ ಕಾವ್ಯಗ್ರಂಥಗಳಾವುವು ?**
ರಾಘವಾಂಕನ ಸೋಮನಾಥ ಚರಿತೆ, ಸಿದ್ಧರಾಮ ಚರಿತೆ, ಭೀಮಕವಿಯ ಬಸವಪುರಾಣ, ಷಡಕ್ಷರದೇವನ ವೃಷಭೇಂದ್ರ ವಿಜಯ, ಚಾಮರಸನ ಪ್ರಭುಲಿಂಗಲೀಲೆ ಇತ್ಯಾದಿ.

**5. ಶರಣ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಕೃಷಿ ಮಾಡಿದ ಪ್ರಮುಖರಾರು ?**
ಫ.ಗು. ಹಳಕಟ್ಟಿ, ಹರ್ಡೇಕರ ಮಂಜಪ್ಪ, ಎಂ.ಆರ್. ಶ್ರೀನಿವಾಸಮೂರ್ತಿ, ಅ.ನ.ಕೃ. ಶಿ.ಶಿ. ಬಸವನಾಳ, ಸಂ.ಶಿ. ಭೂಸನೂರಮಠ, ಆರ್.ಸಿ. ಹಿರೇಮಠ, ಹೆಚ್. ತಿಪ್ಪೇರುದ್ರಸ್ವಾಮಿ, ಎಂ. ಚಿದಾನಂದಮೂರ್ತಿ, ಎಂ.ಎಂ. ಕಲಬುರ್ಗಿ, ಎಲ್. ಬಸವರಾಜು, ಸಿದ್ಧಯ್ಯ ಪುರಾಣಿಕ, ಹಿರೇಮಲ್ಲೂರ ಈಶ್ವರನ್ ಇತ್ಯಾದಿ.

**6. ಶರಣರನ್ನು ಕುರಿತ ಆಧುನಿಕ ಕಾವ್ಯಗಳು ಯಾವುವು?**
ಸಂ.ಶಿ. ಭೂಸನೂರ ಮಠ ಅವರ 'ಭವ್ಯಮಾನವ'. ಜಯದೇವಿ ತಾಯಿ ಲಿಗಾಡೆ ಅವರ 'ಸಿದ್ಧರಾಮಪುರಾಣ' ಮಹದೇವ ಬಣಕಾರರ 'ಮರುಳಸಿದ್ಧ ಕಾವ್ಯ' ಇತ್ಯಾದಿ.

## ವಚನ ಸಾಹಿತ್ಯ

**7. ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ ಯಾವುದು?**
ವಚನಸಾಹಿತ್ಯ.

**8. ವಚನಗಳನ್ನು ಮೊದಲಿಗೆ ರಚಿಸಿದವರಾರು ?**
ಶಿವಶರಣರು

**9. ಆದ್ಯ ವಚನಕಾರನೆಂದು ಯಾರನ್ನು ಕರೆಯುತ್ತಾರೆ ?**
ಜೇಡರ ದಾಸಿಮಯ್ಯನನ್ನು.

**10. ಗುರುತಿಸಲ್ಪಟ್ಟಿರುವ ವಚನಕಾರರು ಎಷ್ಟು ಮಂದಿ?**
ಸುಮಾರು 300 ಜನ.

**11. ಲಭ್ಯವಾಗಿ ಮುದ್ರಣಗೊಂಡಿರುವ ಶರಣರ ವಚನಗಳ ಸಂಖ್ಯೆ ಎಷ್ಟು ?**
ಸುಮಾರು 26,000

**12. ಗುಪ್ತ ಅರ್ಥವನ್ನು ಹೊಂದಿರುವ ವಚನಗಳಿಗೆ ಏನೆಂದು ಕರೆಯುತ್ತಾರೆ ?**
ಬೆಡಗಿನ ವಚನಗಳು.

**13. ವಚನ ಸಾಹಿತ್ಯ ಗದ್ಯವೆ? ಪದ್ಯವೆ ?**
ಗದ್ಯ-ಪದ್ಯ ಮಿಶ್ರಿತ ಪ್ರಕಾರ.

**14. ವಚನ ಸಾಹಿತ್ಯದ ಭಾಷೆ ಯಾವುದು ?**
ಕನ್ನಡ.

**15. ವಚನಕಾರರು ವಚನಗಳನ್ನು ಬರೆಯಲು ಬಳಸುತ್ತಿದ್ದ ಲೇಖನ ಸಾಮಗ್ರಿಗಳೇನು ?**
ತಾಡೋಲೆ, ಲೋಹದ ಕಂಠ.

**16. ವಚನಕಾರರೆಲ್ಲ ಅಕ್ಷರಸ್ಥರೆ ?**
ಅಲ್ಲ.

**17. ಅನಕ್ಷರಸ್ಥರ ವಚನಗಳು ಹೇಗೆ ದಾಖಲಾದವು ?**
ಅವರು ಹೇಳುತ್ತಿದ್ದುದನ್ನು ವಚನ ಭಂಡಾರಿಗಳು ಬರೆದುಕೊಳ್ಳುತ್ತಿದ್ದರು.

**18. ವಚನಾಂಕಿತ ಎಂದರೇನು ?**
ವಚನಕಾರರು ತಮ್ಮ ವಚನಗಳಲ್ಲಿ ಸಂಕೇತವಾಗಿ ಬಳಸುವ ತಮ್ಮ ಆರಾಧ್ಯದೈವ ಅಥವಾ ಗುರುಗಳ ಹೆಸರು

**19. ವಚನಾಂಕಿತವನ್ನು ಬದಲಾಯಿಸಬಹುದೆ?**
ಯಾವ ಕಾರಣಕ್ಕೂ ಬದಲಾಯಿಸಲಾಗದು. ಬದಲಾಯಿಸುವುದು ಸಾಹಿತ್ಯ ದೃಷ್ಟಿಯಿಂದ ಅಪರಾಧ; ವಚನಕಾರರಿಗೆ ಬಗೆದ ದ್ರೋಹ.

**ಸಂಪಾದಕರು : ಗೊ.ರು.ಚನ್ನಬಸಪ್ಪ,**
**ಟಿ.ಆರ್.ಮಹಾದೇವಯ್ಯ**
***(ಕೃಪೆ : ಶರಣ ಕಿರಣ )***

# ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ 61ನೇ ವಾರ್ಷಿಕ ಮಹಾಧಿವೇಶನ

## 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಹಾಗೂ 'ಸಂಘಸಿರಿ' ಪ್ರಶಸ್ತಿ ಪ್ರದಾನ

– ವರದಿ : ಕೆ.ಬಿ. ಶಿವಶಂಕರ್

ಅರವತ್ತು ವರ್ಷಗಳ ವೈಶಿಷ್ಟ್ಯಪೂರ್ಣ ಸಾರ್ಥಕ ಸೇವೆಯಿಂದ ೬೧ನೇ ವಸಂತಕ್ಕೆ ಪಾದಾರ್ಪಣೆ ಮಾಡಿ ವಜ್ರಮಹೋತ್ಸವದ ಸಂಭ್ರಮಾಚರಣೆಯಲ್ಲಿರುವ ನಾಡಿನಾದ್ಯಂತ ಮನೆ, ಮನಗಳಲ್ಲಿ ಪ್ರೀತಿ, ವಿಶ್ವಾಸ, ಗೌರವ ಗಳಿಗೆ ಪಾತ್ರವಾಗಿರುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೧ನೇ ವಾರ್ಷಿಕ ಮಹಾಧಿವೇಶನ ಮತ್ತು ನಾಡು ನುಡಿಗೆ ಸೇವೆ ಸಲ್ಲಿಸಿದ ಪ್ರಸಿದ್ಧ ವಿದ್ವಾಂಸರಿಗೆ, ಸಾಧಕರಿಗೆ, ಸಮಾಜಸೇವಕರಿಗೆ ನೀಡುವ *'ಸಿದ್ಧಗಂಗಾಶ್ರೀ', 'ಸಿದ್ಧಗಂಗಾಶಿವಕುಮಾರಶ್ರೀ',* ಹಾಗೂ *'ಸಂಘಸಿರಿ'* ಪ್ರಶಸ್ತಿ ಪ್ರದಾನ ಸಮಾರಂಭವು ಸಂಘದ ಸಂಸ್ಥಾಪಕ ಅಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಉಪಸ್ಥಿತಿಯಲ್ಲಿ ಡಿಸೆಂಬರ್ ೨೦-೧೨-೨೦೧೫ರ ಭಾನುವಾರ ಗೋಸಲಸಿದ್ಧೇಶ್ವರ ವೇದಿಕೆಯಲ್ಲಿ ಅರ್ಥ ಪೂರ್ಣವಾಗಿ ನಡೆಯಿತು. ಅಪಾರ ಸಂಖ್ಯೆಯಲ್ಲಿ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು ಭಾಗವಹಿಸಿ ಈ ಅಭೂತಪೂರ್ವ ಸಮಾರಂಭಕ್ಕೆ ಸಾಕ್ಷಿಯಾದರು.

ಕಾರ್ಯಕ್ರಮವನ್ನು ಉದ್ಘಾಟಿಸಿ ವಿವಿಧ ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿ ಆಶೀರ್ವದಿಸಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಶಿವನುಡಿಯಲ್ಲಿ *'ಭರತಖಂಡ ಆಧ್ಯಾತ್ಮದ ತಳಹದಿಯ ಮೇಲೆ ನಿಂತಿದೆ. ಅದು ಅತ್ಯಂತ ಶ್ರೇಷ್ಠವಾದುದು. ಮನುಷ್ಯನ ಎಲ್ಲಾ ಸಮಸ್ಯೆಗಳಿಗೆ ಆಧ್ಯಾತ್ಮ ಚಿಂತನೆಯಿಂದ ಪರಿಹಾರ ಇದೆ. ಋಷಿಮುನಿಗಳ, ಸಾಧುಸಂತರ, ತತ್ವಜ್ಞಾನಿಗಳ, ದಾರ್ಶನಿಕರ, ಉದಾತ್ತ ಮೌಲ್ಯಗಳನ್ನು ತಮ್ಮ ನಡೆನುಡಿಗಳಲ್ಲಿ ಅಳವಡಿಸಿಕೊಂಡಾಗ ಮಾತ್ರ ನೆಮ್ಮದಿ ಜೀವನ ನಡೆಸಾಲು ಸಾಧ್ಯ'* ಎಂದು ನುಡಿದರು.

ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಾ 'ಶ್ರೀಮಠಕ್ಕೆ ಹಳೆಯ ವಿದ್ಯಾರ್ಥಿಗಳು ಸಂಪತ್ತು. ಈ ಸಂಘದಿಂದ ಹಮ್ಮಿಕೊಂಡಿರುವ ಸ್ವಚ್ಛತಾ ಯೋಜನೆ, ಪ್ರಶಸ್ತಿ ಪ್ರದಾನ ಎಲ್ಲವೂ ಉತ್ತಮ ಕಾರ್ಯಕ್ರಮಗಳಾಗಿವೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ದೈವಿಸ್ವರೂಪಿಗಳಾದ ಪರಮಪೂಜ್ಯ ಹಿರಿಯ ಶ್ರೀಗಳವರ ಜೊತೆಗೆ ನಾವಿರುವುದೇ ಪುಣ್ಯ. ಸಂತರ ನುಡಿಯಂತೆ ದೀಪವು ಬೆಳಕು ಚೆಲ್ಲುವಂತೆ, ಹೂವು ಸುಗಂಧ ಬೀರುವಂತೆ, ಪ್ರತಿಯೊಬ್ಬರು ಪರೋಪಕಾರಿಯಾಗಿ ಜೀವನ ನಡೆಸಬೇಕು. ಶಿಕ್ಷಣದ ಜತೆಗೆ ಸಂಸ್ಕಾರವನ್ನು ಅಳವಡಿಸಿಕೊಂಡಾಗ ಯಶಸ್ವಿ ಜೀವನ ನಡೆಸಲು ಸಾಧ್ಯ. ಪರಮಪೂಜ್ಯ ಶ್ರೀಶ್ರೀಗಳವರ ಆದರ್ಶ ಜೀವನ ನಮಗೆ ದಾರಿದೀಪವಾಗಿದೆ' ಎಂದು ನುಡಿದರು.

ಒಂದು ಲಕ್ಷ ರೂ ನಗದು ಹಾಗೂ ಪ್ರಶಸ್ತಿ ಫಲಕವನ್ನು ಒಳಗೊಂಡ 'ಸಿದ್ಧಗಂಗಾಶ್ರಿ' ಪ್ರಶಸ್ತಿಗೆ ಭಾಜನರಾದ ನಾಡಿನ ಹಿರಿಯ ಕವಿಗಳು, ಶ್ರೇಷ್ಠ ವಿದ್ವಾಂಸರೂ ಆದ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯನವರು ಪ್ರಶಸ್ತಿ ಸ್ವೀಕರಿಸಿ ಮಾತನಾಡಿ 'ಇಂದು ನಾನು ಪಡೆಯುತ್ತಿರುವ ಪ್ರಶಸ್ತಿ ಎಲ್ಲಾ ಪ್ರಶಸ್ತಿಗಳಿಗಿಂತಲೂ ಶ್ರೇಷ್ಠವಾದುದು ಎಂದು ಸಂತೋಷ ವ್ಯಕ್ತಪಡಿಸಿದರು. ನಿದ್ದೆಯಲ್ಲೂ ಜಪ ಮಾಡುವವನೇ ನಿಜವಾದ ಶರಣ. ಆತನು ಎದ್ದಾಗಲೇ ಶಿವರಾತ್ರಿ. ಆತ ನುಡಿದದ್ದೇ ಪವಿತ್ರ ಹಾಗೂ ನಡೆದದ್ದೇ ತತ್ವ ಎಂಬುದನ್ನು ಬಸವಣ್ಣ ತಮ್ಮ ವಚನದ ಮೂಲಕ ಸಾರಿದ್ದಾರೆ ಎಂದರು.

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಹಾಗೂ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್.ಶಿವರುದ್ರಯ್ಯನವರು ಉಪಸ್ಥಿತರಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಡಾ. ಗುರುಲಿಂಗಕಾಪಸೆ ಅವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ

'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀಮತಿ ರೇಣುಕಾ ಪರಮೇಶ್‌ರವರು

ಶರಣರ ಕಾಯವೇ ಕೈಲಾಸ ಎಂಬ ಮಾತಿಗೆ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಉತ್ತಮ ನಿದರ್ಶನ. ೧೦೮ ವರ್ಷಗಳ ಕಾಯಕಜೀವನ ನಡೆಸಿರುವ ಅವರ ದೇಹ ಶಿವನ ವಾಸಸ್ಥಾನವಾಗಿದೆ. ತ್ರಿವಿಧ ದಾಸೋಹಗಳ ಮೂಲಕ ಶರಣರ ತತ್ತ್ವದ ಬೆಳಕಿನಲ್ಲಿ ಸಾಗಿ ಬಂದಿರುವ ಶ್ರೀಗಳು ಸಾಮಾನ್ಯವಾಗಿದ್ದ ಮಠವನ್ನು ಇಂದು ಶ್ರೇಷ್ಠಮಠವನ್ನಾಗಿಸಿದ್ದಾರೆ. ಅನ್ನ ದಾಸೋಹದಂತಹ ಕಷ್ಟಕರ ಕಾರ್ಯವನ್ನು ಯಾವುದೇ ಅಡ್ಡಿ ಇಲ್ಲದೆ ತಮ್ಮ ದಿವ್ಯಶಕ್ತಿಯಿಂದ ನಡೆಸುತ್ತಿರುವುದು ನಿಜಕ್ಕೂ ಪವಾಡವೇ ಸರಿ ಎಂದು ಬಣ್ಣಿಸಿದರು.

'ಸಿದ್ಧಗಂಗಾಶ್ರೀ' ಪ್ರಶಸ್ತಿಗೆ ಭಾಜನರಾದ ಮತ್ತೋರ್ವ ನಾಡಿನ ಪ್ರಸಿದ್ಧ ವಿದ್ವಾಂಸರಾದ ಧಾರವಾಡದ ಡಾ. ಗುರುಲಿಂಗಕಾಪಸೆ ಅವರು ಮಾತನಾಡಿ 108 ವಸಂತಗಳನ್ನು ಪೂರೈಸಿರುವ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ನಾಡುಕಂಡ ಅಪರೂಪದ ಶ್ರೇಷ್ಠ ಸಂತ, ಶ್ರೇಷ್ಠ ವಾಗ್ಮಿ, ಇಂಗ್ಲಿಷ್, ಸಂಸ್ಕೃತ ಭಾಷೆಯಲ್ಲಿ ಪರಿಣಿತರು. ಸಿದ್ಧಗಂಗೆಯನ್ನು ಬಸವತತ್ತ್ವದ ಪ್ರಯೋಗಶಾಲೆಯನ್ನಾಗಿಸಿದ್ದಾರೆ. ಭಕ್ತರ ಎಲ್ಲಾ ಕಾರ್ಯಗಳಿಗೂ ಪ್ರೇರಣೆಯಾಗಿರುವ ಶ್ರೀಗಳು ನೆಲೆಸಿರುವ ಸಿದ್ಧಗಂಗಾ ಕ್ಷೇತ್ರ ಭೂಲೋಕದ ಸ್ವರ್ಗವಿದ್ದಂತೆ. ಇಲ್ಲಿ ಪಡೆಯುತ್ತಿರುವ ಈ ಪ್ರಶಸ್ತಿ ಜೀವಮಾನದ ಶ್ರೇಷ್ಠ ಪ್ರಶಸ್ತಿ ಎಂದು ಸಂತೋಷ ವ್ಯಕ್ತಪಡಿಸಿದರು.

ಹಿಂದೆ ಋಷಿಮುನಿಗಳು ಹೀಗಿದ್ದರು ಎಂಬುದಕ್ಕೆ ಸಿದ್ಧಗಂಗಾ ಶ್ರೀಗಳೇ ಸಾಕ್ಷಿಯಾಗಿದ್ದಾರೆ. ಅವರ ಸನ್ನಿಧಿಯಲ್ಲಿ ಇರುವುದು ಸವಿಕಲ್ಪ ಸಮಾಧಿಗೆ ಎರಿದ ಆನಂದ ತರುತ್ತದೆ. ತ್ರಿವಿಧ ದಾಸೋಹಿಯಾಗಿ ಅವಿರತ ಸೇವೆ ಸಲ್ಲಿಸುತ್ತಿರುವ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಭಾರತ ರತ್ನ ಪಡೆಯಲು ಸರ್ವರೀತಿಯಲ್ಲೂ ಅರ್ಹರಾಗಿದ್ದಾರೆ. ಅಂತಹವರಿಗೆ ಭಾರತರತ್ನ ಕೊಟ್ಟರೆ ಜಗತ್ತಿನಾದ್ಯಂತವಿರುವ ಅವರ ಭಕ್ತರಿಗೆ ಅಪಾರ

ಸಂತಸ ವಾಗುತ್ತದೆ. ಈ ನಿಟ್ಟಿನಲ್ಲಿ ಸಂಸದರು, ಸರಕಾರ ಪ್ರಯತ್ನಿಸಬೇಕು ಎಂದು ಆಗ್ರಹಿಸಿದರು.

ಬೆಂಗಳೂರಿನ ಶರಣ ಬಳಗದ ಅಧ್ಯಕ್ಷರಾದ ಶ್ರೀಮತಿ ಶಕುಂತಲ ಜಯದೇವ್ ಅವರು ಸ್ಥಾಪಿಸಿರುವ ನಿಧಿಯಿಂದ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯನ್ನು ಕ್ಯಾತ್ಸಂದ್ರದ ಸಮಾಜ ಸೇವಕಿ ಶ್ರೀಮತಿ ರೇಣುಕ ಪರಮೇಶ್ ಹಾಗೂ ದಾವಣಗೆರೆಯ ಪ್ರಸಿದ್ಧ ಸಾಹಿತಿಗಳಾದ ಶ್ರೀ ಕೆ.ಎನ್.ಸ್ವಾಮಿರವರಿಗೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಸಮ್ಮುಖದಲ್ಲಿ ಪ್ರಶಸ್ತಿ ನೀಡಿ ಸನ್ಮಾನಿಸಿ ಆಶೀರ್ವದಿಸಿದರು.

ಕೋಲಾರದ ಕೈಗಾರಿಕೋದ್ಯಮಿಗಳಾದ ಶ್ರೀ ಬಿ.ಎಂ. ಚನ್ನಪ್ಪ, ಸಕಲೇಶಪುರ ತಾಲ್ಲೂಕು, ಕೊಲ್ಲಹಳ್ಳಿ ಗ್ರಾಮದ ಕೃಷಿಕರು ಹಾಗೂ ಶ್ರೀಮಠದ ಭಕ್ತರು ಆಗಿರುವ ಶ್ರೀ ಹೆಚ್.ಪಿ. ಸಂಗಪ್ಪ, ಮಂಡ್ಯದ ಪತ್ರಕರ್ತರಾಗಿರುವ ಶ್ರೀ ಎಂ. ಶಿವಕುಮಾರ್, ಮೈಸೂರಿನ ಶಿಕ್ಷಣ ತಜ್ಞರಾದ ಡಾ.ಬಿ.ಎಸ್. ಪರ್ವತರಾಜುರವರಿಗೆ 'ಸಂಘಸಿರಿ' ಪ್ರಶಸ್ತಿ ನೀಡಿ ಗೌರವಿಸಲಾಯಿತು.

ರಾಷ್ಟ್ರಪ್ರಶಸ್ತಿ ಪುರಸ್ಕೃತರಾದ ಬ್ಯಾಡನೂರು ನಾಗಭೂಷಣ್, ಶ್ರೀಮತಿ ಎನ್.ಬಿ. ಸರೋಜಮ್ಮನವರು ಹಾಗೂ ಸಮಾಜಸೇವಕರಾದ ಮಾಡಗಾನಹಳ್ಳಿ ಹನುಮಂತರಾಯಪ್ಪ, ಶ್ರೀ ತೀರ್ಥಪ್ಪನವರಿಗೆ ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಕಾರ್ಯಕ್ರಮ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಎಂ. ಶಿವಕುಮಾರಸ್ವಾಮಿ ಪ್ರಾರ್ಥನೆಯಿಂದ ಪ್ರಾರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ.ಎಂ.ಎನ್. ಚನ್ನಬಸಪ್ಪನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಸಂಘ ನಡೆದು ಬಂದ ಹಾದಿಯನ್ನು ಪರಿಚಯ ಮಾಡಿಕೊಟ್ಟರು. ಪೂಜ್ಯಶ್ರೀಗಳವರ ಆಶೀರ್ವಾದ ಮತ್ತು ಮಾರ್ಗದರ್ಶನದಿಂದ ಸಂಘ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಧನೆಯ ಪಥದಲ್ಲಿ ಮುನ್ನಡೆಸಿಕೊಂಡು ಬರಲು ಸಾಧ್ಯವಾಗಿದೆ. ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು ಕಾಲ ಕಾಲಕ್ಕೆ ನಮ್ಮ ಮನವಿಗೆ ಸ್ಪಂದಿಸಿ


'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀ ಕೆ.ಎನ್. ಸ್ವಾಮಿರವರು


ಶ್ರೀ ಚೆನ್ನಪ್ಪನವರು 'ಸಂಘಸಿರಿ' ಪ್ರಶಸ್ತಿ ಸ್ವೀಕರಿಸುತ್ತಿರುವುದು


ಡಾ. ಬಿ.ಎಸ್. ಪರ್ವತರಾಜು ಅವರಿಗೆ 'ಸಂಘಸಿರಿ' ಪ್ರಶಸ್ತಿ ಪ್ರದಾನ






ಶ್ರೀ ಸಂಗಪ್ಪನವರು 'ಸಂಘಸಿರಿ' ಪ್ರಶಸ್ತಿ ಸ್ವೀಕರಿಸುತ್ತಿರುವುದು


ಶ್ರೀ ಎಂ. ಶಿವಕುಮಾರ್‌ರವರು 'ಸಂಘಸಿರಿ' ಪ್ರಶಸ್ತಿ ಸ್ವೀಕರಿಸುತ್ತಿರುವುದು


ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನುಡಿನಮನ

ನೆರವು, ಸಹಕಾರ, ಪ್ರೋತ್ಸಾಹ ನೀಡುತ್ತಾ ಬಂದಿರುವುದನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಸಂಘದ ವತಿಯಿಂದ ನಡೆಯುತ್ತಿರುವ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ನ ಬಗ್ಗೆ ಪ್ರಸ್ತಾಪ ಮಾಡಿ ಅದರ ಸಂಪೂರ್ಣ ಯಶಸ್ವಿಗೆ ಎಲ್ಲರೂ ಸಹಕಾರ, ಸಹಾಯ ಮಾಡುವಂತೆ ಕೋರಿ ಸರ್ವರನ್ನು ಸ್ವಾಗತಿಸಿದರು.

ಪ್ರಸಕ್ತ ವರ್ಷದಲ್ಲಿ ನಮ್ಮನ್ನಗಲಿರುವ ಸಂಘದ ಸದಸ್ಯರಿಗೆ ಒಂದು ನಿಮಿಷ ಮೌನವನ್ನು ಆಚರಿಸುವ ಮೂಲಕ ಭಾವಪೂರ್ಣ ಶ್ರದ್ಧಾಂಜಲಿ ಸಲ್ಲಿಸಿ ಮೃತರ ಆತ್ಮಕ್ಕೆ ಶಾಂತಿ ಕೋರಲಾಯಿತು. ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಅಗಲಿದ ಸದಸ್ಯರ ವಿವರಗಳನ್ನು ಸಭೆಯ ಗಮನಕ್ಕೆ ತಂದರು. ನಂತರ ಸಂಘದ ವಾರ್ಷಿಕ ಸಂಕ್ಷಿಪ್ತ ವರದಿಯನ್ನು ಮಂಡಿಸಿದರು.

**೨೦೧೪-೧೫ನೇ ಸಾಲಿನ ಲೆಕ್ಕ ಪತ್ರಗಳ ಪರಿಶೋಧನೆ ಹಾಗೂ ೨೦೧೫-೧೬ನೇ ಸಾಲಿನ ಆಯವ್ಯಯ ಮಂಡನೆ.**

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವರದಿಯನ್ನು ಕಾರ್ಯದರ್ಶಿಗಳಾದ ಪ್ರೊ. ಬಿ. ಗಂಗಾಧರಯ್ಯನವರು, ಸಿದ್ಧಗಂಗಾ ಮಾಸಪತ್ರಿಕೆಯ ವರದಿಯನ್ನು ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯ, ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ ಹಾಗೂ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ನ ವರದಿಯನ್ನು ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸಭೆಯ ಮುಂದೆ ಮಂಡಿಸಿ ಅನುಮೋದನೆ ಪಡೆದರು.

ಶ್ರೀಮಠದ ನೈರ್ಮಲ್ಯ ಪ್ರಗತಿ ಬಗ್ಗೆ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್ ಪ್ರಾರಂಭಿಸಿದ್ದು ನೈರ್ಮಲ್ಯ ಸಮಸ್ಯೆ ಬಗೆಹರಿಸಲು ೫ ಕೋಟಿ ರೂಗಳ ನ್ನಾದರೂ ಸಂಗ್ರಹಿಸಲು ಯಾವ ಯಾವ ರೀತಿಯಲ್ಲಿ ಸಹಾಯ ಸಹಕಾರ ನೀಡಬಹುದು ಎಂಬುದರ ಬಗ್ಗೆ ಶ್ರೀ ಎಂ.ಜಿ. ಸಿದ್ಧರಾಮಯ್ಯನವರು, ಶ್ರೀ ಬಿ.ಎಂ.



ಮಹಾಧಿವೇಶನದಲ್ಲಿ ಮಾತನಾಡಿ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡ ಡಾ. ಎಂ.ಎನ್. ಚನ್ನಬಸಪ್ಪ, ಪ್ರೊ. ಹೆಚ್.ವಿ. ವೀರಭದ್ರಯ್ಯ, ಪ್ರೊ. ಬಿ. ಗಂಗಾಧರಯ್ಯ, ಶ್ರೀ ಕೆ.ಹೆಚ್. ಶಿವರುದ್ರಯ್ಯ, ಶ್ರೀ ಹೆಚ್.ಬಿ. ಗಂಗಾಧಯ್ಯ ಮತ್ತು ಶ್ರೀ ಪಿ.ಎನ್. ಚಂದ್ರಶೇಖರಯ್ಯ ಅವರು



ಬ್ಯಾಡನೂರು ಶ್ರೀ ನಾಗಭೂಷಣ್‌ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ



ಶ್ರೀಮತಿ ಸರೋಜಮ್ಮನವರಿಗೆ ಶ್ರೀಶ್ರೀಗಳವರಿಂದ ಆಶೀರ್ವಾದ

ಪರಮೇಶ್ವರಪ್ಪ ಮುಂತಾದವರು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡರು.



ಸಮಾರಂಭದಲ್ಲಿ ಭಾಗವಹಿಸಿದ್ದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು

ಇದೇ ಸಂದರ್ಭದಲ್ಲಿ ಅನೇಕ ಜನ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು ಉದಾರವಾಗಿ ಧನಸಹಾಯ ನೀಡಿದರು. ಅವರೆಲ್ಲರಿಗೂ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಕೃತಜ್ಞತೆ ಸಲ್ಲಿಸಿದರು. ಇನ್ನು ಹೆಚ್ಚು ಹೆಚ್ಚು ಉದಾರವಾಗಿ ನೆರವು ನೀಡಲು ಬಿನ್ನವಿಸಿಕೊಂಡರು.

ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರು, ಜಾನಪದ ವಿದ್ವಾಂಸರು ಆದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶ್ರೀ ಪಿ.ಎನ್. ಚಂದ್ರಶೇಖರಯ್ಯ ಅವರು ಶರಣು ಸಮರ್ಪಣೆ ಮಾಡಿದರು.





# ಶ್ರೀಮಠದಲ್ಲಿ ನಡೆದ ೯ನೇ ಸಂಸ್ಕೃತೋತ್ಸವ

ಶ್ರೀ ಸಿದ್ಧಲಿಂಗೇಶ್ವರ ವೇದ–ಸಂಸ್ಕೃತ ಸ್ನಾತಕ–ಸ್ನಾತಕೋತ್ತರ ಅಧ್ಯಯನ ಕೇಂದ್ರ, ಶ್ರೀ ಉದ್ದಾನೇಶರ ವೇದ–ಸಂಸ್ಕೃತ ಪಾಠಶಾಲೆ ಮತ್ತು ಶ್ರೀ ಶಿವಕುಮಾರ ಸ್ವಾಮೀಜಿ ವೇದ–ಸಂಸ್ಕೃತ ಪಾಠಶಾಲೆ ಇವುಗಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ ೧೮–೧೨–೨೦೧೫ರಂದು ಶ್ರೀಮಠದಲ್ಲಿ ಅತ್ಯಂತ ವಿಜೃಂಭಣೆಯಿಂದ ೯ನೇ ಸಂಸ್ಕೃತೋತ್ಸವವನ್ನು ಆಚರಿಸಲಾಯಿತು.

ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಧ್ವಜಾರೋಹಣ ಮಾಡಿದರು. ನಂತರ ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಎಸ್. ವಿಶ್ವನಾಥಯ್ಯನವರು 'ಸಂಸ್ಕೃತ–ಸಂಸ್ಕೃತಿ ವಸ್ತು ಪ್ರದರ್ಶನದ ಉದ್ಘಾಟನೆಯನ್ನು ನೆರವೇರಿಸಿದರು. ವ್ಯವಸ್ಥಾಪಕರಾದ ಶ್ರೀ ಪಿ.ವಿ. ಹುಚ್ಚವೀರಯ್ಯನವರು ವಿದ್ಯಾರ್ಥಿಗಳ ಪಥಸಂಚಲನೆಗೆ ಚಾಲನೆ ನೀಡಿದರು. ನಂತರ ಶ್ರೀಕ್ಷೇತ್ರದಲ್ಲಿ ಸಂಸ್ಕೃತಾಭ್ಯಾಸ ಮಾಡುವ ಎಲ್ಲಾ ಮಕ್ಕಳು ಆಕರ್ಷಕ ಪಥಸಂಚಲನದಲ್ಲಿ ಭಾಗವಹಿಸಿ ಸಂಸ್ಕೃತೋತ್ಸವಕ್ಕೆ ಮೆರುಗನ್ನು ನೀಡಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾ ಸ್ವಾಮಿಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಶಾಸ್ತ್ರಾರ್ಥಗೋಷ್ಠಿಯನ್ನು ಉದ್ಘಾಟಿಸಿ ಆಶೀರ್ವಚನ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ವೇದ–ಸಂಸ್ಕೃತ ಕಾಲೇಜಿನ ವಿಶ್ರಾಂತ ಅಲಂಕಾರಶಾಸ್ತ್ರದ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಕೆ. ಬಸವರಾಜುರವರು **'ಅಲಂಕಾರ ಪ್ರಸ್ಥಾನಮ್'** ಎಂಬ ವಿಷಯ ಮಂಡನೆ ಮಾಡಿದರು. ವ್ಯಾಕರಣಶಾಸ್ತ್ರದಲ್ಲಿ **'ಸರ್ವಶಾಸ್ತ್ರೋಪಕಾರಕಮ್' ವ್ಯಾಕರಣಶಾಸ್ತ್ರಮ್'** ಎಂಬ ವಿಷಯವನ್ನು ವಿಶ್ರಾಂತ ವ್ಯಾಕರಣಶಾಸ್ತ್ರದ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಸೋ. ನರಸಿಂಹರವರು ಮಂಡಿಸಿದರು. ನವೀನನ್ಯಾಯಶಾಸ್ತ್ರದಲ್ಲಿ **'ಪ್ರದೀಪಃ ಸರ್ವ ವಿದ್ಯಾನಾಮ್'** ಎಂಬ ವಿಷಯದ ಬಗ್ಗೆ ವಿಶ್ರಾಂತ ನವೀನನ್ಯಾಯಶಾಸ್ತ್ರದ ಪ್ರಾಧ್ಯಾಪಕರಾದ ಡಾ. ಆರ್. ಶ್ರೀಧರಶಾಸ್ತ್ರೀ ಸೂರಿಯವರು ವಿಷಯ ಮಂಡನೆ ಮಾಡಿದರು. ಶಕ್ತಿವಿಶಿಷ್ಟಾದ್ವೈತ ವೇದಾಂತ ಶಾಸ್ತ್ರದಲ್ಲಿ ಮೋಕ್ಷ ಸ್ವರೂಪಮ್ ಎಂಬ ವಿಷಯದ ಬಗ್ಗೆ ನಿವೃತ್ತ ಪ್ರಾಂಶುಪಾಲರಾದ ವಿದ್ವಾನ್ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಮಂಡನೆ ಮಾಡಿದರು.

ಶಾಸ್ತ್ರಾರ್ಥಗೋಷ್ಠಿಯ ಅಧ್ಯಕ್ಷತೆಯನ್ನು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಅಧ್ಯಯನಾಂಗದ ನಿರ್ದೇಶಕರಾದ ಡಾ. ವೀರನಾರಾಯಣ, ಎನ್.ಕೆ. ಪಾಂಡುರಂಗಿರವರು ವಹಿಸಿದ್ದರು.

ಅಂದು ಸಂಜೆ ಪ್ರಾರ್ಥನಾ ಪ್ರಾಂಗಣದಲ್ಲಿ ನಡೆದ ೯ನೇ ಸಂಸ್ಕೃತೋತ್ಸವದ ಸಮಾರೋಪ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರು ದಿವ್ಯಸಾನ್ನಿಧ್ಯವನ್ನು ವಹಿಸಿದ್ದರು.

ದಿವ್ಯ ಉಪಸ್ಥಿತಿ ವಹಿಸಿದ್ದ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಮಕ್ಕಳು ಹಿರಿಯರ ಮಾತುಗಳನ್ನು ಆಲಿಸಬೇಕು, ಆದರ್ಶಗಳನ್ನು ಪಾಲಿಸಬೇಕು' ಎಂದು ತಿಳಿಸಿದರು. ಮೈಸೂರಿನ ಮಲಿಮಲ್ಲಪ್ಪ ಕಾಲೇಜಿನ ನಿವೃತ್ತ ಪ್ರಾಚಾರ್ಯರಾದ ಡಾ.ಬಿ.ಎಸ್. ಪರ್ವತರಾಜುರವರು ಸಂಸ್ಕೃತ ಭಾಷೆ ಕುರಿತ ಉಪನ್ಯಾಸದಲ್ಲಿ **'ಭಾರತೀಯ ಸಂಸ್ಕೃತಿ ಅಧ್ಯಯನಕ್ಕೆ'** ಸಂಸ್ಕೃತ ಭಾಷೆ ಅತ್ಯವಶ್ಯಕ. ಈ ಭಾಷೆಯನ್ನು ಅಧ್ಯಯನ ಮಾಡದಿದ್ದರೆ ಅವನು ನಿಜವಾದ ಭಾರತೀಯನೇ ಅಲ್ಲ ಎಂದರಲ್ಲದೆ. ನಮ್ಮ ತಂದೆ–ತಾಯಿ ನನಗೆ ಜನ್ಮ ಕೊಟ್ಟರು. ಶ್ರೀ ಸಿದ್ಧಗಂಗೆಯ ಶ್ರೀಗಳು ನನ್ನ ಕಣ್ಣಿಗೆ ಬೆಳಕನ್ನು ಕೊಟ್ಟರು ಎಂದು ಶ್ರೀಮಠದ ವ್ಯಾಸಂಗದ ದಿನಗಳನ್ನು ಸ್ಮರಿಸಿದರು. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಪ್ರೊ. ಪದ್ಮಾಶೇಖರ್ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ನಗದು ಪುರಸ್ಕಾರ ಹಾಗೂ ನೆನಪಿನ ಕಾಣಿಕೆ ನೀಡಿ ಗೌರವಿಸಿ ಮಾತನಾಡುತ್ತಾ 'ಅನೇಕ ಭಾಷೆಗಳ ತಾಯಿಬೇರು ಸಂಸ್ಕೃತ ಭಾಷೆ. ಬದುಕನ್ನು ರೂಪಿಸುವ ಸತ್ವಯುತವಾದ ಈ ಭಾಷೆಯನ್ನು ಶ್ರದ್ಧೆಯಿಂದ ಕಲಿಯಬೇಕು' ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಸರ್ಕಾರದ ಉನ್ನತ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ

ಪೂಜ್ಯರಿಂದ ವಿದ್ವಾನ್ ಶ್ರೀ ಮಲ್ಲವೀರಯ್ಯರವರಿಗೆ ಆಶೀರ್ವಾದ

ಪೂಜ್ಯರಿಂದ ವಿದ್ವಾನ್ ಶ್ರೀ ಬಿ.ಕೆ. ಲಿಂಗಯ್ಯರವರಿಗೆ ಆಶೀರ್ವಾದ

ಸನ್ಮಾನ್ಯಶ್ರೀ ಭರತ್‌ಲಾಲ್ ಮೀನಾ ಇವರು ತಮ್ಮ ಭಾಷಣದಲ್ಲಿ ಜ್ಞಾನವೇ ಶಕ್ತಿ, ದಾನಗಳಲ್ಲಿ ವಿದ್ಯಾದಾನವೇ ಶ್ರೇಷ್ಠ. ವಿದ್ಯಾರ್ಥಿಗಳು ಸಮಾಜಕ್ಕೆ ಒಳ್ಳೆಯ ನಾಗರಿಕರಾಗ ಬೇಕು. ಶ್ರಮಪಟ್ಟರೆ ಗೆಲುವು ಖಚಿತ, ಅವರು ಜೀವನದಲ್ಲಿ ಉತ್ತಮ ಸಾಧಕರಾಗುತ್ತಾರೆ ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ಈ ಕಾಲೇಜಿನಲ್ಲಿ ವ್ಯಾಕರಣ ಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿ ನಿವೃತ್ತರಾದ ವಿದ್ವಾನ್ ಶ್ರೀ ಎಂ. ಮಲ್ಲವೀರಯ್ಯ ಹಾಗೂ ಅಲಂಕಾರಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತರಾದ ವಿದ್ವಾನ್ ಶ್ರೀ ಬಿ.ಕೆ. ಲಿಂಗಯ್ಯನವರನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಸನ್ಮಾನಿಸಿ ಆಶೀರ್ವದಿಸಿದರು. ಸಂಸ್ಕೃತ ವಿಶ್ವವಿದ್ಯಾಲಯದ ಉಪ ಕುಲಸಚಿವರು ಹಾಗೂ ಹಣಕಾಸು ಅಧಿಕಾರಿಗಳಾದ ವಿದ್ವಾನ್ ಶ್ರೀ ಪಿ.ಆರ್. ಪಾಗೋಜಿರವರು ಕೂಡ ಸಭೆಯಲ್ಲಿ ಉಪಸ್ಥಿತರಿದ್ದರು. ಕಾಲೇಜಿನ ಸಹ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಎಂ. ಶಾಂತಕುಮಾರ್ ಸ್ವಾಗತಿಸಿದರು. ಮುಖ್ಯಶಿಕ್ಷಕರಾದ ವಿದ್ವಾನ್‌ಶ್ರೀ ರಾಮಕೃಷ್ಣ ವಂದಿಸಿದರು. ಕಾಲೇಜಿನ ಪ್ರಾಂಶುಪಾಲರಾದ ವಿದ್ವಾನ್ ಶ್ರೀ ಜಿ.ಸಿ. ರಾಜಶೇಖರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು.

## ಕೃಷಿ ಹಾಗೂ ಕೈಗಾರಿಕಾ ವಸ್ತುಪ್ರದರ್ಶನದ ಭೂಮಿಪೂಜೆ

ದಿನಾಂಕ ೧೫-೦೧-೨೦೧೬ರ ಶುಕ್ರವಾರ ಬೆಳಿಗ್ಗೆ ೮.೦೦ ಗಂಟೆಗೆ ವಸ್ತುಪ್ರದರ್ಶನದ ಆವರಣದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಭೂಮಿ ಪೂಜೆಯನ್ನು ನೆರವೇರಿಸಲಾಯಿತು. ಕಾರ್ಯದರ್ಶಿಗಳಾದ ಬಿ. ಗಂಗಾಧರಯ್ಯ, ಸಹ ಕಾರ್ಯದರ್ಶಿಗಳಾದ ಶ್ರೀ ಎಸ್. ಶಿವಕುಮಾರ್, ಶ್ರೀ ಕೆ.ಬಿ. ರೇಣುಕಯ್ಯನವರು ಹಾಗೂ ವಸ್ತುಪ್ರದರ್ಶನ ಸಮಿತಿಯ ಸದಸ್ಯರುಗಳು, ಸಂಚಾಲಕರು ಈ ಸಂದರ್ಭದಲ್ಲಿ ಭಾಗವಹಿಸಿದ್ದರು.

## ವಿದ್ಯುತ್ ಗುತ್ತಿಗೆದಾರರ ಸಂಘದ ತಾಂತ್ರಿಕ ದಿನಚರಿ ಬಿಡುಗಡೆ

ಜನವರಿ ೧೩ ರಂದು ಶ್ರೀಮಠದಲ್ಲಿ ಉದ್ದಾನಶಿವಯೋಗಿಗಳ ಸಮುದಾಯ ಭವನದಲ್ಲಿ ಕರ್ನಾಟಕ ರಾಜ್ಯ ಅನುಮತಿ ಪಡೆದ ವಿದ್ಯುತ್ ಗುತ್ತಿಗೆದಾರರ ಸಂಘದ ತಾಂತ್ರಿಕ ದಿನಚರಿಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಸಂಘದ ರಾಜ್ಯಾಧ್ಯಕ್ಷರಾದ ಶ್ರೀ ಪ್ರಕಾಶ್ ಸಿ. ಅಂಗಡಿ, ಪ್ರಧಾನ ಕಾರ್ಯದರ್ಶಿ ಬಿ. ರುದ್ರೇಶ್, ಬೆಸ್ಕಾಂನ ವ್ಯವಸ್ಥಾಪಕ ನಿರ್ದೇಶಕ ಪಂಕಜ್ ಕುಮಾರ್ ಪಾಂಡೆ ಮತ್ತು ಕೆ. ಶ್ಯಾಮಸುಂದರ್, ನಾಗರಾಜ್, ಆರ್. ಕೃಷ್ಣಸ್ವಾಮಿ ಹಾಗೂ ರಾಜ್ಯದ ಗುತ್ತಿಗೆದಾರರು ಭಾಗವಹಿಸಿದ್ದರು.

*ವಿದ್ಯಾರ್ಥಿ ಜೀವನ ಅದು ದೊಡ್ಡ ತಪಸ್ಸು.*
*ಅತ್ಯಂತ ಕಠಿಣವಾಗಿರತಕ್ಕಂತಹ ಕಾಲ.*
– ಶ್ರೀವಾಣಿ





## ಪೂಜ್ಯ ಲಿಂ. ಶ್ರೀ ಅಟವೀಸ್ವಾಮಿಗಳ ಮತ್ತು ಪೂಜ್ಯ ಲಿಂ. ಶ್ರೀ ಉದ್ದಾನಶಿವಯೋಗಿಗಳ ಪುಣ್ಯಾರಾಧನೆ ಹಾಗೂ ಗುರುಸ್ಮರಣೆ ಮತ್ತು ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ ಸಮಾರಂಭ

ಶಿವಾನುಭವಚರಮೂರ್ತಿ ಪೂಜ್ಯ ಶ್ರೀ ಶಿವರುದ್ರ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಜ್ಯೋತಿ ಬೆಳಗಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ದಿನಾಂಕ ೧೫-೦೧-೨೦೧೬ರ ಶುಕ್ರವಾರ ಶ್ರೀಕ್ಷೇತ್ರದಲ್ಲಿ ನಡೆದ ಪೂಜ್ಯಶ್ರೀ ಶ್ರೀ ಅಟವೀಸ್ವಾಮಿಗಳ ೧೧೫ನೇ ಮತ್ತು ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ೭೫ನೇ ಪುಣ್ಯಾರಾಧನೆ ಹಾಗೂ ಗುರುಸ್ಮರಣೆ ಮತ್ತು ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ ಕಾರ್ಯಕ್ರಮ ಉದ್ಘಾಟಿಸಿದರು.

ಅಟವೀ ಶಿವಯೋಗಿಗಳು, ಉದ್ದಾನ ಶಿವಯೋಗಿಗಳು, ಈಗಿನ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಂದ ಶ್ರೀಕ್ಷೇತ್ರ ಶಿವಯೋಗಿ ಪುಂಗವರ ನೆಲೆಯಾಗಿದೆ. ನಾಡಿನಲ್ಲಿ ಅಥಣಿ ವಿಜಯಮಹಾಂತೇಶ ಶಿವಯೋಗಿಗಳು, ಅಟವಿಶಿವಯೋಗಿ ಗಳು, ಉದ್ದಾನ ಶಿವಯೋಗಿಗಳು ಹೀಗೆ ಅನೇಕ ಶಿವಯೋಗಿಗಳಿಂದ ನೂರಾರು ವರ್ಷಗಳ ಹಿಂದೆ ಇಡೀ ಸಮಾಜವೇ ಶಿವಯೋಗಿಗಳ ಕೇಂದ್ರವಾಗಿತ್ತು ಎಂದರು.

ಈಗಿನ ೧೦೮ ವರ್ಷದ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ತಮ್ಮ ತಪಸ್ಸಿನ ಶಕ್ತಿಯಿಂದ ಮನುಕುಲದ ಮಂಗಳ ಜ್ಯೋತಿಯಾಗಿದ್ದಾರೆ. ಉದ್ದಾನ ಶ್ರೀಗಳು, ಶಿವಕುಮಾರಸ್ವಾಮಿಗಳು ಯುಗದ ಅವತಾರ. ಶತಮಾನದ ಕೌತುಕ ಎಂದು ಹೇಳಿದರು. ಸಂಕ್ರಾಂತಿ ಹಬ್ಬ ಬೆಳಕಿನೆಡೆಗೆ ನಡೆಯುವ ಹಬ್ಬ. ಇಂಥ ಬೆಳಕಿನಂತೆಯೇ ಶ್ರೀಕ್ಷೇತ್ರವು ಲಕ್ಷಾಂತರ ಜನರಿಗೆ ಮಾರ್ಗದರ್ಶನ ಮಾಡಿದೆ. ಸದ್ದುಗದ್ದಲವಿರದ ಸಾಧನೆ ಶ್ರೀಕ್ಷೇತ್ರದಲ್ಲಿ ಆಗಿದೆ ಎಂದು ನುಡಿದರು.

ಪರಮಪೂಜ್ಯ ಶ್ರೀಗಳವರಿಂದ 'ಉದ್ದಾನಶ್ರೀ' ಪ್ರಶಸ್ತಿ ಪ್ರದಾನ ಶ್ರೀ ಗುರುಬಸವದೇವರ ಕುಟುಂಬವರ್ಗದವರಿಗೆ

ಪರಮಪೂಜ್ಯ ಶ್ರೀಗಳವರಿಂದ 'ಅಟವೀಶ್ರೀ' ಪ್ರಶಸ್ತಿಯನ್ನು ಲಿಂ. ಕೆ.ಬಸಪ್ಪನವರ ಕುಟುಂಬವರ್ಗದವರಿಗೆ ಪ್ರದಾನ

ಸಿದ್ಧಗಂಗಾ ಸಂಕ್ರಮಣ ಸಂಚಿಕೆ ಬಿಡುಗಡೆ ಮಾಡಿದ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಮಾತನಾಡಿ ಅಟವಿಸ್ವಾಮಿಗಳು, ಉದ್ದಾನ ಶಿವಯೋಗಿಗಳು ಪವಾಡಸದೃಶ ಕೆಲಸ ಮಾಡಿದವರು. ಪೂಜ್ಯ ಅಟವಿಶಿವಯೋಗಿಗಳ ಕಾಲದಲ್ಲಿ ಪ್ರಾರಂಭವಾದ ಅನ್ನದಾಸೋಹ ಇಂದಿಗೂ ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ಉದ್ದಾನಶಿವಯೋಗಿಗಳ ಕಾಲದಲ್ಲಿ ವಿದ್ಯಾರ್ಥಿನಿಲಯ, ಸಂಸ್ಕೃತಶಾಲೆ ಪ್ರಾರಂಭಿಸಿ ಜಾತಿ, ಮತ, ಭೇದ ತೊರೆದು ಸಾರ್ವಜನಿಕವಾಗಿ ಅವಕಾಶ ಕಲ್ಪಿಸಿದರು. ಶಿವರಾತ್ರಿ ಸಂದರ್ಭದಲ್ಲಿ ಜಾತ್ರೆ ಪ್ರಾರಂಭಿಸಿದರು. ಜನತೆಯಲ್ಲಿ ಧಾರ್ಮಿಕ, ಸಾಂಸ್ಕೃತಿಕ ಪ್ರಜ್ಞೆ ಬೆಳೆಸಿದರು. ಪರಮಪೂಜ್ಯ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡಿದ್ದು ಉದ್ದಾನಶಿವಯೋಗಿಗಳ ದಿವ್ಯದೃಷ್ಟಿಗೆ ಸಾಕ್ಷಿಯಾಗಿದೆ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಕಾಲದಲ್ಲಿ ಅದ್ಭುತವಾಗಿ ಬೆಳೆದ ಶ್ರೀಕ್ಷೇತ್ರ ಉತ್ತಮ ಗುರು ಪರಂಪರೆ ಹೊಂದಿದೆ ಎಂದು ನುಡಿದರು.

ಡಾ. ಸೀ.ಚ. ಯತೀಶ್ವರರವರು ಉಪನ್ಯಾಸ ನೀಡಿ 'ಸಿದ್ಧಗಂಗಾಮಠ ಆರೋಗ್ಯಯುತ ಸಮಾಜ ಕಟ್ಟುವ ಮಹತ್ವದ ಕಾರ್ಯ ಮಾಡಿದೆ. ಶಿವಶರಣರ ವಿಚಾರಧಾರೆಯ ಸಾಕಾರಸ್ವರೂಪವಾಗಿದೆ. ಶ್ರೀಮಠದಲ್ಲಿ ನಡೆಯುವ ತ್ರಿವಿಧ ದಾಸೋಹವನ್ನು ಎಲ್ಲೂ ಕಾಣಲು ಸಾಧ್ಯವಿಲ್ಲ' ಎಂದು ತಿಳಿಸಿದರು.

ನಿವೃತ್ತ ಇಂಗ್ಲಿಷ್ ಉಪನ್ಯಾಸಕರು ಹಾಗೂ ಶ್ರೀಮಠದ ಮುದ್ರಣಾಲಯದ ಮೇಲ್ವಿಚಾರಕರಾಗಿದ್ದ ಲಿಂ.ಕೆ. ಬಸಪ್ಪ ಅವರಿಗೆ ಮರಣೋತ್ತರವಾಗಿ ನೀಡಲಾದ **'ಅಟವೀಶ್ರೀ'** ಪ್ರಶಸ್ತಿಯನ್ನು ಅವರ ಪುತ್ರ ಶ್ರೀ ಬಿ.ಪ್ರಕಾಶ್ ಅವರು ಸ್ವೀಕರಿಸಿದರು.

ಶ್ರೀ ಸಿದ್ಧಗಂಗಾ ಮಠದ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಲಿಂ. ಗುರುಬಸವದೇವರು ಅವರಿಗೆ ಮರಣೋತ್ತರವಾಗಿ ನೀಡಿದ **'ಉದ್ದಾನಶ್ರೀ'** ಪ್ರಶಸ್ತಿಯನ್ನು ಲಿಂ. ಗುರುಬಸವದೇವರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರು ಸ್ವೀಕರಿಸಿದರು. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಪ್ರಶಸ್ತಿ ಪ್ರದಾನ ಮಾಡಿ ಆಶೀರ್ವದಿಸಿದರು. ಲಿಂ. ಗುರುಬಸವೇವರ ಪುತ್ರ ಶ್ರೀ ಹೆಚ್.ಜಿ. ಬಸವರಾಜು ರವರು ಶ್ರೀಮಠದ ಸೇವೆಯನ್ನು ಸ್ಮರಿಸಿದರು.

ಸಮಾರಂಭದಲ್ಲಿ ಪ್ರಶಸ್ತಿಗಳ ಸೇವಾದಾಸೋಹಿಗಳಾದ ಕ್ಯಾತ್ಸಂದ್ರದ ರವಿದರ್ಶನ್ ಹೋಟೆಲ್‌ನ ಮಾಲೀಕರಾದ ಶ್ರೀಮತಿ ರೇಣುಕಾ ಪರಮೇಶ್‌ರವರು ಉಪಸ್ಥಿತರಿದ್ದರು.

ಬೆಂಗಳೂರಿನ ಟಿ. ದಾಸರಹಳ್ಳಿಯ ಬಸವಶ್ರೀ ಚಾರಿಟಬಲ್ ಟ್ರಸ್ಟ್ ಹಾಗೂ ವೀರಶೈವ ಯುವವೇದಿಕೆ ವತಿಯಿಂದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಭಾವಚಿತ್ರವಿರುವ ಕ್ಯಾಲೆಂಡರ್, ಬೆಂಗಳೂರಿನ ಶರಣು ವಿಶ್ವವಚನ ಫೌಂಡೇಷನ್ ವತಿಯಿಂದ ೨೦೧೬ರ ಶರಣ ದಿನಚರಿ ಹಾಗೂ ಶರಣು ಸಿ.ಡಿ.ಗಳನ್ನು, ತುಮಕೂರಿನ ಉದ್ದಾನೇಶ್ವರ ಸೌಹಾರ್ದ ಪತ್ತಿನ ಸಹಕಾರ ಸಂಘದ ವತಿಯಿಂದ ೨೦೧೬ನೇ ಸಾಲಿನ ಕ್ಯಾಲೆಂಡರ್‌ನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಇದೇ ವೇದಿಕೆಯಲ್ಲಿ ಸೂರ್ಯಬ್ರಹ್ಮಾಸ್ತ್ರ ಕನ್ನಡ ಮಾಸಪತ್ರಿಕೆ ಜನವರಿ ತಿಂಗಳ ಸಂಚಿಕೆಯನ್ನೂ ಬಿಡುಗಡೆ ಮಾಡಲಾಯಿತು.

ದಾವಣಗೆರೆಯ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರೌಢಶಾಲೆಯ ರೇಖಾ ಜಿ, ರೇಣುಕ, ಸುಜನ ಎಂಬ ವಿದ್ಯಾರ್ಥಿನಿಯರು ಸ್ಥಳದಲ್ಲೇ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳ ರೇಖಾಚಿತ್ರವನ್ನು ಬಿಡಿಸಿದ್ದು ಭಕ್ತರ ಗಮನ ಸೆಳೆಯಿತು. ಎಲ್ಲರೂ ಆ ಮಕ್ಕಳ ಬಾಲಪ್ರತಿಭೆಯನ್ನು ಪ್ರಶಂಸಿಸಿದರು.

ಸಂಸ್ಕೃತ ಪಾಠಶಾಲೆಯ ಶಿಕ್ಷಕರಾದ ಶ್ರೀ ಎ. ಶಿವಕುಮಾರ್ ರವರು ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸ್ವಾಗತಿಸಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು.

ಮಧ್ಯಾಹ್ನ ಮೂರು ಗಂಟೆಗೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ ಸಮಾರಂಭ ನಡೆಯಿತು. ಕನಕಪುರ ದೇಗುಲ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣಮಹಾಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಪ್ರಾಸ್ತಾವಿಕ ಭಾಷಣ ಮಾಡಿದರು. ನೆಲಮಂಗಲ ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನ ನಿವೃತ್ತ ಪ್ರಾಚಾರ್ಯರಾದ ಪ್ರೊ. ಎಂ. ಪ್ರಸನ್ನಕುಮಾರ್ ಮತ್ತು ನಾಗವಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜಿನ ಉಪನ್ಯಾಸಕರಾದ ಶ್ರೀ ಸುರೇಶ್‌ರವರು ಉಪನ್ಯಾಸ ನೀಡಿದರು.

ಬೆಳಿಗ್ಗೆ ೯.೦೦ ಗಂಟೆಗೆ ನಂದಿಧ್ವಜ, ಕರಡಿಮಜಲು, ಮಂಗಳವಾದ್ಯ, ಮಂಗಳ ಕಳಶಗಳೊಂದಿಗೆ ಲಿಂ. ಪೂಜ್ಯ ಶ್ರೀ ಶ್ರೀ ಅಟವೀಶಿವಯೋಗಿಗಳ ಹಾಗೂ ಲಿಂ. ಪೂಜ್ಯ ಶ್ರೀ ಶ್ರೀ ಉದ್ದಾನಶಿವಯೋಗಿಗಳವರ ಭಾವಚಿತ್ರಗಳ ಪಲ್ಲಕ್ಕಿ ಉತ್ಸವ ವಿಜೃಂಭಣೆಯಿಂದ ನಡೆಯಿತು. ರಾತ್ರಿ ೮.೦೦ ಗಂಟೆಗೆ ಶ್ರೀ ಪಿ.ಎನ್. ರುದ್ರಪ್ಪ ವಿರಚಿತ 'ಅಮರಜ್ಯೋತಿ ಅಕ್ಕಮಹಾದೇವಿ' ರೂಪಕವನ್ನು ಶ್ರೀ ಸಿದ್ಧಗಂಗಾಮಠದ ಶಿಕ್ಷಕರುಗಳು ಹಾಗೂ ವಿದ್ಯಾರ್ಥಿಗಳು ಅಭಿನಯಿಸಿದರು.

## ಅಭಿನಂದನೆ

ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಶ್ರೀ ಸಿದ್ಧಗಂಗಾ ಮಠದಲ್ಲಿ ೧೦ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಸಚಿನ್ ತುಕಾರಾಮ್ ಸಾಳುಂಕೆ ಮತ್ತು ಪ್ರಜ್ವಲ್ ನಿರಂಜನ ಎಂಬ ವಿದ್ಯಾರ್ಥಿಗಳು ನವೆಂಬರ್ ೨೦೧೫ರಂದು ಬೀದರ್‌ನಲ್ಲಿ ನಡೆದ ರಾಜ್ಯಮಟ್ಟದ ಅಥ್ಲೆಟಿಕ್ಸ್ ಜ್ಯೂನಿಯರ್ ಕ್ರೀಡಾಕೂಟದಲ್ಲಿ ಭಾಗವಹಿಸಿದ್ದರು. ಸಚಿನ್ ತುಕಾರಾಮ ಸಾಳುಂಕೆ ಹ್ಯಾಮರ್ ಎಸೆತದ ಸ್ಪರ್ಧೆಯಲ್ಲಿ ರಾಜ್ಯಮಟ್ಟದಲ್ಲಿ ಪ್ರಥಮ ಸ್ಥಾನಗಳಿಸಿ ಚಿನ್ನದ ಪದಕ ಪಡೆದಿರುತ್ತಾನೆ. ಈತ ಮುಂದೆ ಜಾರ್ಖಂಡ್ ರಾಜ್ಯದ ರಾಂಚಿಯಲ್ಲಿ ನಡೆಯಲಿರುವ ರಾಷ್ಟ್ರಮಟ್ಟದ ಕ್ರೀಡಾಕೂಟಕ್ಕೆ ಆಯ್ಕೆಯಾಗಿರುತ್ತಾನೆ. ಈ ಸಾಧನೆ ಮಾಡಿರುವ ವಿದ್ಯಾರ್ಥಿಯನ್ನು ಶಾಲೆಯ ಮುಖ್ಯೋಪಾಧ್ಯಾಯರು, ಶಿಕ್ಷಕವೃಂದ ಅಭಿನಂದಿಸಿದೆ. ಈ ವಿದ್ಯಾರ್ಥಿಯ ಪ್ರತಿಭೆಯನ್ನು ಮೆಚ್ಚಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಹಾಗೂ ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಸನ್ಮಾನಿಸಿ ಆಶೀರ್ವದಿಸಿದ್ದಾರೆ. ಈ ವಿದ್ಯಾರ್ಥಿ ರಾಷ್ಟ್ರಮಟ್ಟದಲ್ಲಿ ಪ್ರಥಮ ಸ್ಥಾನಗಳಿಸಿ ಶಾಲೆಗೆ, ಸಂಸ್ಥೆಗೆ ಕೀರ್ತಿ ತರಲಿ ಎಂದು ಸಿದ್ಧಗಂಗಾ ಹಾರೈಸುತ್ತದೆ.

## ಶ್ರೀಮಠದಲ್ಲಿರುವ ಶ್ರೀ ಸಿದ್ಧಗಂಗಾ ಆಂಗ್ಲ ಮಾಧ್ಯಮ ಪ್ರೌಢಶಾಲೆಯಲ್ಲಿ 'ಸಾಂಸ್ಕೃತಿಕ ಸಂಭ್ರಮ'



ದಿನಾಂಕ ೩೦-೧೨-೨೦೧೫ನೇ ಬುಧವಾರದಂದು ಶ್ರೀ ಸಿದ್ಧಗಂಗಾ ಆಂಗ್ಲ ಮಾಧ್ಯಮ ಪ್ರೌಢಶಾಲೆಯಲ್ಲಿ ಸಾಂಸ್ಕೃತಿಕ ಹಬ್ಬವನ್ನು ಏರ್ಪಡಿಸಲಾಗಿತ್ತು. ಬೆಳಿಗ್ಗೆ ೧೦ ಗಂಟೆಗೆ ಪರಮಪೂಜ್ಯ ಮಹಾಶಿವಯೋಗಿಗಳವರ ದಿವ್ಯ ಪಾದಪೂಜೆಯೊಂದಿಗೆ ಕಾರ್ಯಕ್ರಮ ಶುಭಾರಂಭವಾಯಿತು. ಮಧ್ಯಾಹ್ನ ೧೨ ಗಂಟೆಯಿಂದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಸಾವಿರಾರು ಜನರಿಗೆ ಭಕ್ಷ್ಯ- ಭೋಜ್ಯಗಳ ವ್ಯವಸ್ಥೆಯಾಗಿತ್ತು. ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ಸಂಸ್ಕೃತ ಮಹಾವಿದ್ಯಾಲಯದ ಮುಂಭಾಗದಲ್ಲಿ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಧ್ವಜಾರೋಹಣ ಮಾಡುವ ಮೂಲಕ ಆನೆ, ಕುದುರೆ, ವೃಷಭಗಳು, ಗೋವು- ಕರುಗಳನ್ನು ಒಳಗೊಂಡಂತೆ ಹತ್ತಾರು ಸಾಂಸ್ಕೃತಿಕ ತಂಡಗಳಿಂದ ಕೂಡಿದ ಉತ್ಸವಕ್ಕೆ ಚಾಲನೆ ನೀಡಿದರು. ಮೆರವಣಿಗೆಯಲ್ಲಿ ಪೋಷಕರನ್ನೊಳಗೊಂಡಂತೆ, ಶ್ರೀಮಠದ ಅಭಿಮಾನಿಗಳು, ವಿದ್ಯಾರ್ಥಿಗಳು ಹೀಗೆ ಸಾವಿರಾರು ಜನರು ಪಾಲ್ಗೊಂಡ ಅಭೂತಪೂರ್ವ ಮೆರವಣಿಗೆ ವಸ್ತು ಪ್ರದರ್ಶನದ ಆವರಣಕ್ಕೆ ಆಗಮಿಸಿದ ನಂತರ ಸಮಾರಂಭ ಪ್ರಾರಂಭವಾಯಿತು. ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಎಸ್. ರೇಣುಕಾರಾಧ್ಯರವರು ಸರ್ವರನ್ನು ಸ್ವಾಗತಿಸಿದರು. ಸಮಾರಂಭದಲ್ಲಿ 'ನವದುರ್ಗೆಯರ ಪೂಜೆ' ನಡೆಯಿತು. ಕಾರ್ಯಕ್ರಮದ ಅಂಗವಾಗಿ ಶತಾಯುಷಿಗಳು, ತಾಯಂದಿರು, ಕೃಷಿಕರು, ಕಾರ್ಮಿಕರು, ಸ್ವಾತಂತ್ರ್ಯ ಹೋರಾಟಗಾರರು, ನಿವೃತ್ತ ಸೈನಿಕರು ಹಾಗೂ ವಿಶೇಷ ಆಹ್ವಾನಿತರನ್ನು ಗೌರವಿಸಲಾಯಿತು. ಅಮೆರಿಕಾದ ಹಿರಿಯ ವಿಜ್ಞಾನಿ ಡಾ. ಸಜ್ಜನಶಿವರವರು ತಮ್ಮ ಉದ್ಘಾಟನಾ ಭಾಷಣದಲ್ಲಿ ವಿಜ್ಞಾನದ ಮತ್ತು ಆಂಗ್ಲಭಾಷೆ ಕಲಿಕೆಯ ಜೊತೆಗೆ ತಮ್ಮ ಶ್ರೇಷ್ಠವಾದ ದೇಶೀಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಕೊಳ್ಳಬೇಕಾದ ಅಗತ್ಯತೆಯನ್ನು ಒತ್ತಿ ಹೇಳಿದರು. ಮತ್ತೊಬ್ಬ ಹಿರಿಯ ವಿಜ್ಞಾನಿಗಳಾದ ಡಾ. ಕೆ.ಎನ್. ತಿಮ್ಮಯ್ಯನವರು ಸಾಂಸ್ಕೃತಿಕ ಹಬ್ಬದ ಮಹತ್ವವನ್ನು ಕುರಿತು ವ್ಯಾಖ್ಯಾನಿಸಿದರಲ್ಲದೆ ತಮಗೆ ಅಮಿತಾನಂದವುಂಟಾಗಿದೆಯೆಂದು ಸಾಂಸ್ಕೃತಿಕ ವೈಭವ ವನ್ನು ಶ್ಲಾಘಿಸಿದರು.

ಎಸ್ಐಟಿ ಕಾಲೇಜಿನ ನಿರ್ದೇಶಕರಾದ ಡಾ.ಎಂ.ಎನ್. ಚನ್ನಬಸಪ್ಪನವರು, ಸಿಐಟಿ ನಿರ್ದೇಶಕರದ ಶ್ರೀ ಜ್ಯೋತಿ ಗಣೇಶ್‌ರವರು ಸಮಾರಂಭವನ್ನು ಕುರಿತು ಅಪಾರವಾದ ಮೆಚ್ಚುಗೆಯುನ್ನು ವ್ಯಕ್ತಪಡಿಸಿದರು. ಅಧ್ಯಕ್ಷತೆಯನ್ನು ವಹಿಸಿದ್ದ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು, ಶ್ರೀ ಸಿದ್ಧಗಂಗಾ ಆಂಗ್ಲ ಮಾಧ್ಯಮ ಶಾಲೆಯ ಪ್ರಗತಿ ಮತ್ತು ಚಟುವಟಿಕೆಗಳನ್ನು ಕುರಿತು ಮೆಚ್ಚುಗೆ ವ್ಯಕ್ತಪಡಿಸಿದುದಲ್ಲದೆ, ಸಂಸ್ಕೃತಿಯನ್ನು ಅಳವಡಿಸಿ ಕೊಳ್ಳಬೇಕಾದ ಮಹತ್ವವನ್ನು ಒತ್ತಿ ಹೇಳಿದರು.

ಸಮಾರಂಭದ ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಮಾನವ ಸುಸಂಸ್ಕೃತನಾಗದ ಹೊರತು ಪರಿಪೂರ್ಣ ಜೀವನವನ್ನು ನಡೆಸಲು ಸಾಧ್ಯವಿಲ್ಲವೆಂದು ಒತ್ತಿ ಹೇಳಿದರು. ಶ್ರೀ ಶ್ರೀಗಳವರು ಆಂಗ್ಲ ಮಾಧ್ಯಮ ಪ್ರೌಢಶಾಲೆಯ ಸಾಧನೆಯನ್ನು ಮುಕ್ತಕಂಠದಿಂದ ಪ್ರಶಂಸಿದರಲ್ಲದೆ, ಅಲ್ಲಿನ ಬೋಧಕ ಹಾಗೂ ಬೋಧಕೇತರರ ಸೇವೆಯನ್ನು ಶ್ಲಾಘಿಸಿದರು. ಶಿಕ್ಷಕರಾದ ಶ್ರೀ ಎಚ್.ಆರ್. ನವೀನ್ ವಂದನಾರ್ಪಣೆ ಸಲ್ಲಿಸಿದರು. ನಂತರ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು. ಇಡೀ ಕಾರ್ಯಕ್ರಮವನ್ನು ಕುರಿತು ನೆರೆದಿದ್ದ ಸಹಸ್ರಾರು ಜನರು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.





## ಶ್ರೀಮಠದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ




ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ ದಿನಾಂಕ ೨೫-೧೨-೨೦೧೫ರಿಂದ ೨೭-೧೨-೨೦೧೫ ರವರೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆಯಿತು. ಈ ಕ್ರೀಡಾಕೂಟದಲ್ಲಿ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಕ್ರೀಡಾಪಟುಗಳು ಭಾಗವಹಿಸಿದ್ದರು.

ದಿನಾಂಕ ೨೫-೧೨-೨೦೧೫ರಂದು ಸಂಜೆ ೪ ಗಂಟೆಗೆ ಕ್ರೀಡಾಕೂಟದ ಉದ್ಘಾಟನಾ ಸಮಾರಂಭ ನಡೆಯಿತು. ಈ ಸಮಾರಂಭದ ದಿವ್ಯಸಾನ್ನಿಧ್ಯವನ್ನು ಕ್ರೀಡಾಕೂಟದ ಸಂಸ್ಥಾಪಕ ಅಧ್ಯಕ್ಷರಾದ ಪರಮಪೂಜ್ಯ ಡಾ.ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ವಹಿಸಿದ್ದರು. ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ದಿವ್ಯ ಉಪಸ್ಥಿತಿ ವಹಿಸಿದ್ದರು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಆಹಾರ ಮತ್ತು ನಾಗರಿಕ ಪೂರೈಕೆ ಇಲಾಖೆ, ತುಮಕೂರು ಇದರ ಉಪನಿರ್ದೇಶಕರಾದ ಶ್ರೀ ಮಂಟೇಸ್ವಾಮಿಯವರು ಕ್ರೀಡಾಕೂಟವನ್ನು ಉದ್ಘಾಟಿಸಿದರು. ತುಮಕೂರಿನ ಯುವ ಸಬಲೀಕರಣ ಮತ್ತು ಕ್ರೀಡಾಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಸೀಬಿ ರಂಗಯ್ಯನವರು ಧ್ವಜಾರೋಹಣ ಮಾಡಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಭಾರ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ರಾಮಚಂದ್ರಪ್ಪನವರು ಕ್ರೀಡಾಜ್ಯೋತಿ ಹಾಗೂ ವಂದನಾ ಸ್ವೀಕಾರ ಮಾಡಿದರು.

ದಿನಾಂಕ ೨೭-೧೨-೨೦೧೫ರ ಭಾನುವಾರ ಸಂಜೆ ೫.೩೦ ಗಂಟೆಗೆ ಶ್ರೀಮಠದ ಪ್ರಾರ್ಥನಾ ಸಭಾಂಗಣದಲ್ಲಿ ಕ್ರೀಡಾಕೂಟದ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಸಮಾರಂಭದ ದಿವ್ಯಸಾನ್ನಿಧ್ಯವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ವಹಿಸಿದ್ದರು. ದಿವ್ಯ ಉಪಸ್ಥಿತಿಯನ್ನು ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ವಹಿಸಿದ್ದರು. ಕ್ರೀಡಾಕೂಟದಲ್ಲಿ ಕ್ರೀಡಾಪಟುಗಳಿಗೆ ಬೆಂಗಳೂರಿನ ಕೀರ್ತಿ ಕನ್‌ಸ್ಟ್ರಕ್ಷನ್ಸ್‌ನ ಶ್ರೀ ಎನ್. ಸುರೇಶ್‌ರವರು ಬಹುಮಾನ ವಿತರಣೆ ಮಾಡಿ ಅಭಿನಂದಿಸಿದರು.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳು

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೯೬೯. | ಡಾ. ಎಂ.ಎನ್. ಚನ್ನಬಸಪ್ಪ, ನಿರ್ದೇಶಕರು, ಎಸ್‌ಐಟಿ, ತುಮಕೂರು | ೧,೯೧,೧೯೩.೦೦ |
| ೯೭೦. | ಶ್ರೀ ಸಿದ್ಧಲಿಂಗಪ್ಪ ಹೊಸಪಾಳ್ಯ | ೧,೦೦೦.೦೦ |
| ೯೭೧. | ಶ್ರೀ ಹೆಚ್. ಗಂಗಾಧರ್ ಬೆಂಗಳೂರು | ೧,೦೦೦.೦೦ |
| ೯೭೨. | ಶ್ರೀ ಹಿತೈಷಿ ಬೆಂಗಳೂರು | ೧೦,೦೦೦.೦೦ |
| ೯೭೩. | ಶ್ರೀ ಬಿ.ಜೆ. ಸುಹಾಸ್ ಬೆಟ್ಟಸೋಗೆ | ೫,೦೦೧.೦೦ |
| ೯೭೪. | ಶ್ರೀ ವಿಶ್ವಬಂಧು ವಿದ್ಯಾರ್ಥಿನಿಯರ ನಿಲಯದ ವತಿಯಿಂದ, ತುಮಕೂರು | ೫,೦೦೧.೦೦ |
| ೯೭೫. | ಡಾ. ಬಿ.ಜೆ. ರಾಜಶೇಖರಪ್ಪ ಬೆಂಗಳೂರು | ೫,೦೦೧.೦೦ |
| ೯೭೬. | ಶ್ರೀ ಸಿ. ಕೆಂಪಯ್ಯ ಸಿ.ಎಸ್. ಪುರ | ೨,೦೦೧.೦೦ |
| ೯೭೭. | ಶ್ರೀ ಹೆಚ್.ಎಸ್. ಶಂಕರಯ್ಯ ಹಾಸನ | ೧,೦೦೦.೦೦ |
| ೯೭೮. | ಶ್ರೀ ಸಿ. ಚನ್ನಬಸವಯ್ಯ ತಾಳಗುಂದ | ೧೦,೦೦೦.೦೦ |
| ೯೭೯. | ಶ್ರೀಮತಿ ಶಕುಂತಲಾ ಜಯದೇವ್ ಬೆಂಗಳೂರು | ೧೦,೦೦೦.೦೦ |
| ೯೮೦. | ಶ್ರೀ ಸಿದ್ಧಗಂಗಪ್ಪ ಹೊಸಕೆರೆ | ೧,೦೦೦.೦೦ |
| ೯೮೧. | ಶ್ರೀ ಕೆ.ಎಲ್. ಸಿದ್ಧಲಿಂಗಯ್ಯ ಬೆಂಗಳೂರು | ೪೦,೪೦೧.೦೦ |
| ೯೮೨. | ಶ್ರೀ ಎಂ.ಬಿ. ಶಿವಣ್ಣ ಹಾಸನ | ೨,೦೦೦.೦೦ |
| ೯೮೩. | ಶ್ರೀ ಎಸ್. ಶಿವಣ್ಣ ಬೆಂಗಳೂರು | ೧,೦೦೧.೦೦ |
| ೯೮೪. | ಶ್ರೀ ಟಿ.ಎಸ್. ವಿರೂಪಾಕ್ಷಯ್ಯ ತೊಂಡಗೆರೆ | ೧,೦೦೧.೦೦ |
| ೯೮೫. | ಶ್ರೀ ಎಸ್. ಮಹದೇವಯ್ಯ ಬೆಂಗಳೂರು | ೫೦,೦೦೦.೦೦ |
| ೯೮೬. | ಶ್ರೀ ಹೆಚ್.ಎಂ. ಶಿವಮಲ್ಲಪ್ಪ ಅಟ್ಟುಗುಲಿಪುರ | ೧,೦೦೧.೦೦ |
| ೯೮೭. | ಶ್ರೀ ಕರಿಸಿದ್ಧಯ್ಯ ತಿಪಟೂರು | ೩,೦೦೦.೦೦ |
| ೯೮೮ | ಶ್ರೀ ಸಿದ್ಧಗಂಗಪ್ಪ ಹೊಸಪಾಳ್ಯ | ೧,೦೦೦.೦೦ |
| ೯೮೯. | ಶ್ರೀ ಬಿ. ಪುಟ್ಟರಾಜಣ್ಣ ವಿಜಯಪುರ | ೧,೦೦೦.೦೦ |
| ೯೯೦. | ಶ್ರೀ ಗುರುಮಲ್ಲಪ್ಪ ತುಮಕೂರು | ೧,೧೧೧.೦೦ |
| ೯೯೧. | ಶ್ರೀ ಹೆಚ್.ಆರ್. ನಂಜುಂಡಯ್ಯ ಭದ್ರಾವತಿ | ೫,೦೦೦.೦೦ |
| ೯೯೨. | ಶ್ರೀ ಶಿವಯೋಗಿ ಬುಳ್ಳ ಹುಬ್ಬಳ್ಳಿ | ೧,೦೦೧.೦೦ |
| ೯೯೩. | ಶ್ರೀ ಕೆ.ಶಿವಪ್ಪ ಮೈಸೂರು | ೫,೫೧೧.೦೦ |
| ೯೯೪. | ಶ್ರೀ ನರಸಿಂಹಮೂರ್ತಿ ಮಾದಿಹಳ್ಳಿ | ೫,೦೦೧.೦೦ |
| ೯೯೫. | ಶ್ರೀ ಸಿ. ಮಾದಪ್ಪ ಬೆಂಗಳೂರು | ೨,೦೦೧.೦೦ |
| ೯೯೬. | ಶ್ರೀ ಎಂ. ಶಿವಕುಮಾರಸ್ವಾಮಿ ಮೈಸೂರು | ೧,೦೦೦.೦೦ |
| ೯೯೭. | ಶ್ರೀಮತಿ ಎಸ್. ಶೀಲಾವತಿ ಮಲ್ಲೇಕಾವು | ೫,೦೦೧.೦೦ |
| ೯೯೮. | ಶ್ರೀ ಬಿ.ಜಿ. ಅಶೋಕ ಬೆಟ್ಟದಪುರ | ೧,೦೦೦.೦೦ |
| ೯೯೯. | ಶ್ರೀ ಟಿ.ಎಸ್. ಸಿದ್ಧಲಿಂಗಸ್ವಾಮಿ ಬೆಂಗಳೂರು | ೧೦,೦೦೧.೦೦ |
| ೧೦೦೦. | ಶ್ರೀ ಎನ್.ಆರ್. ಜ್ಯೋತ್ಸನಾ ಬೆಂಗಳೂರು | ೧೦,೦೦೧.೦೦ |
| ೧೦೦೧. | ಶ್ರೀ ಎಂ.ಎಂ. ನಂಜುಂಡಸ್ವಾಮಿ ನಟ್ಟಹಳ್ಳಿ | ೧,೫೦೦.೦೦ |
| ೧೦೦೨. | ಶ್ರೀ ಪಿ.ಎನ್. ಶಿವರುದ್ರಪ್ಪ ತುಮಕೂರು | ೧,೦೦೦.೦೦ |

(ಮುಂದುವರೆಯುತ್ತದೆ)





ಕೇರಳ ರಾಜ್ಯದ ವೀರಶೈವ ಸಮಾಜದ ಪದಾಧಿಕಾರಿಗಳು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು.



ತುಮಕೂರು ನಗರದ ಎಸ್.ಐ.ಟಿ. ಬಿರ್ಲಾ ಸಭಾಂಗಣದಲ್ಲಿ ನಡೆದ ಅನುಭಾಯ ಚಿತ್ರೋತ್ಸವವನ್ನು ಪರಮಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಟಿ.ಬಿ. ಜಯಚಂದ್ರ, ನಿವೃತ್ತ ಐ.ಎ.ಎಸ್. ಅಧಿಕಾರಿ ಡಾ. ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಕರ್ನಾಟಕ ರಾಜ್ಯ ಪಶುಸಂಗೋಪನಾ ಸಚಿವರಾದ ಶ್ರೀ ಎ. ಮಂಜು ರವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ, ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.



ಬೆಂಗಳೂರಿನ ಸ್ಪರ್ಶ ಆಸ್ಪತ್ರೆ ಹಾಗೂ ಭಾರತೀಯ ವೈದ್ಯಕೀಯ ಸಂಘ ತುಮಕೂರು ಮತ್ತು ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ಇವರ ಸಂಯುಕ್ತ ಆಶ್ರಯದಲ್ಲಿ ನಡೆದ ಉಚಿತ ವೈದ್ಯಕೀಯ ಶಿಬಿರವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.



ತುಮಕೂರು ನಗರದ ಚಿಲುಮೆ ಸಮುದಾಯ ಭವನದಲ್ಲಿ ನಡೆದ ಮೈಸೂರು ಸ್ಯಾಂಡಲ್ ಸೋಪಿನ ಮೇಳವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮೈಸೂರು ಸ್ಯಾಂಡಲ್ ಸೋಪು ಕಾರ್ಖಾನೆಯ ಅಧಿಕಾರಿಗಳು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಬೆಂಗಳೂರಿನ ಶ್ರೀ ಅಂಬಿಕಾ ಪ್ರೌಢಶಾಲಾ ವಿದ್ಯಾರ್ಥಿನಿ ರಾಷ್ಟ್ರಮಟ್ಟದ ಯೋಗಪಟು ಕು. ಪವಿತ್ರಾ ಎಲ್. ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶಾಲು ಹೊದಿಸಿ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.